Vol - 12 August 2013 Issue No. 08 ₹ 5.00/-





# ಕರ್ನಾಟಕ ಸ್ಕೌಟ್ ಮತ್ತು ಗೈಡ್

ಮಾಸಿಕ ವಾರ್ತಾಪತ್ರಿಕೆ

# Karnataka Scout & Guide

*Monthly News Magazine*



ದಿನಾಂಕ 15.08.2013ರಂದು ಹಾವೇರಿಯಲ್ಲಿ ನಡೆದ ಸ್ವಾತಂತ್ರ್ಯೋತ್ಸವದ ಪಥಚಲನದಲ್ಲಿ ದ್ವಿತೀಯ ಸ್ಥಾನ ಪಡೆದ ಗೈಡ್ಸ್ ತಂಡಕ್ಕೆ ಶ್ರೀ ಪ್ರಕಾಶ್ ಬಿ. ಹುಕ್ಕೇರಿ, ಮಾನ್ಯ ಮುಜರಾಯಿ, ಸಣ್ಣ ಕೈಗಾರಿಕೆ ಹಾಗೂ ಸಕ್ಕರೆ ಇಲಾಖೆಗಳ ಸಚಿವರು ಮತ್ತು ಜಿಲ್ಲಾ ಉಸ್ತುವಾರಿ ಸಚಿವರು ಬಹುಮಾನ ನೀಡಿ ಗೌರವಿಸಿದರು. ಶ್ರೀ ರುದ್ರಪ್ಪ ಲಮಾಣಿ, ಮಾನ್ಯ ಶಾಸಕರು ಹಾವೇರಿ, ಶ್ರೀ ಪಾಂಡುರಂಗ ಬಿ. ನಾಯಕ್, ಜಿಲ್ಲಾಧಿಕಾರಿಗಳು, ಶ್ರೀ ಎನ್. ಶಶಿಧರ ಪೋಲಿಸ್ ವರಿಷ್ಠಾಧಿಕಾರಿಗಳು ಹಾಗು ಇತರರರನ್ನು ಕಾಣಬಹುದು.




ದಿನಾಂಕ 15.08.2013ರಂದು ಬಾಗಲಕೋಟೆ ಜಿಲ್ಲಾಡಳಿತ ವತಿಯಿಂದ ನಡೆದ ಸ್ವಾತಂತ್ರ್ಯೋತ್ಸವದ ಪಥಚಲನದಲ್ಲಿ ತೃತೀಯ ಸ್ಥಾನ ಪಡೆದ ಗೈಡ್ಸ್ ತಂಡಕ್ಕೆ ಶ್ರೀ ಎಸ್.ಆರ್. ಪಾಟೀಲ, ಮಾನ್ಯ ಐ.ಟಿ-ಬಿ.ಟಿ. ಮತ್ತು ಸಾಂಖ್ಯಿಕ ಇಲಾಖೆಗಳ ಸಚಿವರು ಹಾಗೂ ಜಿಲ್ಲಾ ಉಸ್ತುವಾರಿ ಸಚಿವರು ಪ್ರಶಸ್ತಿ ನೀಡಿ ಗೌರವಿಸಿದರು. ಶ್ರೀ ಹುಲಪ್ಪ ಮೇಟಿ, ಮಾನ್ಯ ಶಾಸಕರು ಮತ್ತು ಇತರರರನ್ನು ಕಾಣಬಹುದು.



ದಿನಾಂಕ 27 ರಿಂದ 28 ಜುಲೈ 2013ರ ವರೆಗೆ ಬಿಜಾಪುರ ಕಂದಗಲ್ ಹನುಮಂತರಾಯ ರಂಗಮಂದಿರದಲ್ಲಿ ನಡೆದ ಸಂಯುಕ್ತ ಕರ್ನಾಟಕದ ೪೦ರ ಸಂಭ್ರಮದ ಕಾರ್ಯಕ್ರಮದ ಸಂದರ್ಭದಲ್ಲಿ ಶ್ರೀ ಎಂ.ಬಿ. ಪಾಟೀಲ್, ಮಾನ್ಯ ಬೃಹತ್, ಮಧ್ಯಮ ನೀರಾವರಿ ಇಲಾಖೆಗಳ ಸಚಿವರು ಹಾಗೂ ಜಿಲ್ಲಾ ಉಸ್ತುವಾರಿ ಸಚಿವರು ಮತ್ತು ಲೋಕ ಶಿಕ್ಷಣ ಟ್ರಸ್ಟ್ ಅಧ್ಯಕ್ಷರಾದ ಶ್ರೀ ಅಶೋಕ ಹಾರ್ನಳ್ಳಿ ಅವರು ಸ್ಕೌಟ್ಸ್‌ಗಳಿಗೆ ಪ್ರಶಸ್ತಿನೀಡಿ ಗೌರವಿಸುತ್ತಿರುವುದು.




ದಿನಾಂಕ 15.08.2013ರಂದು ಕೊಪ್ಪಳದ ಜಿಲ್ಲಾಡಳಿತ ವತಿಯಿಂದ ನಡೆದ ಸ್ವಾತಂತ್ರ್ಯೋತ್ಸವದ ಪಥಚಲನದಲ್ಲಿ ಪ್ರಥಮ ಸ್ಥಾನ ಪಡೆದ ಸರಸ್ವತಿ ವಿದ್ಯಾ ಮಂದಿರ ಶಾಲೆಯ ಗೈಡ್ಸ್ ತಂಡಕ್ಕೆ ಶ್ರೀ ಶಿವರಾಜ್ ತಂಗಡಗಿ, ಮಾನ್ಯ ಸಣ್ಣ ನಿರಾವರಿ ಸಚಿವರು ಮತ್ತು ಜಿಲ್ಲಾ ಉಸ್ತುವಾರಿ ಸಚಿವರು ಬಹುಮಾನ ನೀಡಿ ಗೌರವಿಸಿದರು. ಶ್ರೀ ರಾಘವೇಂದ್ರ ಹಿಟ್ನಾಳ, ಮಾನ್ಯ ಶಾಸಕರು, ಶ್ರೀ ಕೆ.ಪಿ. ಮೋಹನ್ ರಾಜ್, ಜಿಲ್ಲಾಧಿಕಾರಿಗಳು, ಶ್ರೀ ಮಂಜುನಾಥ ಅಣ್ಣಿಗೇರಿ, ಪೋಲಿಸ್ ವರಿಷ್ಠಾಧಿಕಾರಿಗಳು ಹಾಗೂ ಇತರರರನ್ನು ಕಾಣಬಹುದು.



ದಿನಾಂಕ 29ರಿಂದ 31 ಜುಲೈ 2013ರವರೆಗೆ ಗದಗ್‌ನ ಕೆ.ಹೆಚ್. ಪಾಟೀಲ್ ಸಭಾ ಭವನದಲ್ಲಿ ನಡೆದ ಬೆಳಗಾವಿ ವಿಭಾಗದ ಆಯುಕ್ತರುಗಳ ಹಾಗೂ ಕಾರ್ಯದರ್ಶಿಗಳ ಸಮಾವೇಶದಲ್ಲಿ ಭಾಗವಹಿಸಿದ್ದ ಗದಗ್ ಜಿಲ್ಲಾ ಸಂಸ್ಥೆ ಉಪಾಧ್ಯಕ್ಷರಾದ ಶ್ರೀ ಈಶಣ್ಣ ಮನವಳ್ಳಿ ಮತ್ತು ರಾಜ್ಯ ಮುಖ್ಯ ಆಯುಕ್ತರಾದ ಶ್ರೀ ಕೊಂಡಜ್ಜಿ ಬ. ಷಣ್ಮುಖಪ್ಪರವರು, ಜಿಲ್ಲಾ ಸ್ಕೌಟ್ ಆಯುಕ್ತರಾದ ಶ್ರೀ ಮುಕುಂದ ಪೋತ್ನಿಸ್, ಜಿಲ್ಲಾ ಗೈಡ್ ಆಯುಕ್ತೆ ಶ್ರೀಮತಿ ಸುಮಾ ಗರಗ್, ರಾಜ್ಯ ಪದಾಧಿಕಾರಿಗಳು ಹಾಗೂ ಜಿಲ್ಲಾ ಪದಾಧಿಕಾರಿಗಳನ್ನು ಕಾಣಬಹುದು.



ಬೀದರ ಜಿಲ್ಲೆಯ ನೆಹರು ಕ್ರೀಡಾಂಗಣದಲ್ಲಿ ಸ್ವಾತಂತ್ರ್ಯೋತ್ಸವ ದಿನದಂದು ರಾಜ್ಯ ಪುರಸ್ಕಾರ ಪ್ರಶಸ್ತಿ ಪಡೆದ ಸ್ಕೌಟ್ಸ್-ಗೈಡ್ಸ್‌ಗಳಿಗೆ ಜಿಲ್ಲಾಡಳಿತ ವತಿಯಿಂದ ಪ್ರಶಸ್ತಿ ನೀಡಿ ಸನ್ಮಾನಿಸಲಾಯಿತು. ಚಿತ್ರದಲ್ಲಿ ಶ್ರೀ ಗುರುಪಾದಪ್ಪ ನಾಗಮಾರಪಲ್ಲಿ. ಮಾನ್ಯ ಶಾಸಕರು, ಡಾ. ಪಿ.ಸಿ. ಜಾಫರ್, ಜಿಲ್ಲಾಧಿಕಾರಿಗಳು ಹಾಗೂ ಇತರ ಜಿಲ್ಲಾ ಸಂಸ್ಥೆ ಪದಾಧಿಕಾರಿಗಳನ್ನು ಕಾಣಬಹುದು.



ದಿನಾಂಕ 27.07.2013ರಂದು ಬಿಜಾಪುರ ಜಿಲ್ಲಾ ಸಂಸ್ಥೆಗೆ ವಿಧಾನ ಪರಿಷತ್ ಸದಸ್ಯರಾದ ಶ್ರೀ ಅರುಣ ಶಹಾಪುರ ರವರು ಭೇಟಿ ನೀಡಿದ ಸಂದರ್ಭದಲ್ಲಿ ಜಿಲ್ಲಾ ಸಂಸ್ಥೆ ಪದಾಧಿಕಾರಿಗಳು ಜಿಲ್ಲಾ ತರಬೇತಿ ಕೇಂದ್ರದ ಅಭಿವೃದ್ಧಿಗೆ ನಾಲ್ಕು ಲಕ್ಷ ಅನುದಾನ ಕೋರಿ ಮನವಿಯನ್ನು ಸಲ್ಲಿಸಿದರು.




ದಿನಾಂಕ 25 ರಿಂದ 27 ಜುಲೈ 2013ರವರೆಗೆ ಹಾಸನ ಜಿಲ್ಲೆ ಅರಸೀಕೆರೆ ಸ್ಥಳೀಯ ಸಂಸ್ಥೆ ವತಿಯಿಂದ ಜರುಗಿದ "ಪೆಟ್ರೋಲ್ ಲೀಡರ್ಸ್" ತರಬೇತಿ ಶಿಬಿರದ ಉದ್ಘಾಟನಾ ಕಾರ್ಯಕ್ರಮದಲ್ಲಿ ಸ್ಥಳೀಯ ಸಂಸ್ಥೆ ಕಾರ್ಯದರ್ಶಿ ಶ್ರೀ ಜೆ.ಎಲ್. ಲೀಲಾ ಮಹೇಶ್ವರ್, ಎ.ಡಿ.ಸಿ.ಗಳಾದ ಶ್ರೀ ಬಿ.ಕೆ. ಯೋಗೀಶ್ವರಾಚಾರ್, ಶ್ರೀ ವಿಷ್ಣುಮೂರ್ತಿ ಭಟ್ ಹಾಗೂ ಶ್ರೀಮತಿ ಕಾಮೇಶ್ವರಿಭಟ್ ಮತ್ತಿತರರನ್ನು ಕಾಣಬಹದು




ದಿನಾಂಕ 21-08-2013ರಂದು ನಡೆದ ಕೋಲಾರ, ಮುಳಬಾಗಿಲು ಮತ್ತು ಶ್ರೀನಿವಾಸಪುರ ತಾಲ್ಲೂಕುಗಳ ಸ್ಕೌಟರ್-ಗೈಡರ್ ಸಮಾವೇಶವನ್ನು ಶ್ರೀನಿವಾಸಪುರದ ಶ್ರೀ ವೇಣು ವಿದ್ಯಾಸಂಸ್ಥೆಯ ಆಡಳಿತಾಧಿಕಾರಿ ಶ್ರೀ ಗೋಪಾಲಗೌಡ, ಜಿಲ್ಲಾ ಸ್ಕೌಟ್ ಆಯುಕ್ತ ಶ್ರೀ ಚಾಂದ್‌ಪಾಷಾ, ಗೌರವ ರಾಜ್ಯ ತರಬೇತಿ ಆಯುಕ್ತ ಶ್ರೀ ಚಿನ್ನಸ್ವಾಮಿರೆಡ್ಡಿ ದೀಪ ಬೆಳಗಿಸಿ ಉದ್ಘಾಟಿಸಿದರು.

# *Editor's Desk.......*

***Common strategy is the need of the hour in our state and also all over The Bharat Scouts & Guides. Strategy is not simply ritual or formality, it should be well thought of planning with set of goals and clear vision for future. Further the group / committee should accept the challenge to execute the strategies with convinced support from professionals / volunteers. In addition it should be measurable, intervened, updated with regular intervals and if needed a change also has to be brought in the strategies.***

***What we now come across in recent time is that we have blindly accepted and work the strategy, without understanding the basics. Many of the individuals or professional from the working team have no clarity on what they are working for. So proper training and execution should also be in its place for outcome of strategies we have planned.***

***Why are we going so deep on Strategies? Reason is very simple, we have well prepared budgets for set of activities to make young people better, with all round development, responsible and self managed citizens for the future. We are fortunate in getting all out support from various corners and authorities to implement our plans, but unfortunately, we are conducting all our activities as rituals since the same have become mandatory for our professionals, so we do it. Also to utilize the grants / supports we get and show the world that we working without analysing the results or process or satisfaction of young blood.***

***Time has come to show our accountability to those who support us and to them who come to us for better life skills with progressive programme. Some where some links are missing? Is it that our mechanism of management is not working or our committees are not functioning. Further,there is a feeling that the volunteers/ professionals are not aligned to show results with commitment.***

***So before concluding let us be clear that, a strategy needs belongingness and sustainable commitments from one and all to make our plan viable as well as visible (results).***

***M.A. KHALID***
*State Secretary*

# ರಾಜ್ಯ ಮುಖ್ಯ ಆಯುಕ್ತರ ನುಡಿ..........................

ಆತ್ಮೀಯರೇ,

ರಾಜ್ಯದ ಇಬ್ಬರು ಹಿರಿಯ ಸ್ಕೌಟ್-ಗೈಡ್ ನಾಯಕರುಗಳು ಈ ತಿಂಗಳು ನಿಧನರಾಗಿದ್ದಾರೆ. ಬಳ್ಳಾರಿ ಜಿಲ್ಲೆಯಲ್ಲಿ ಕಳೆದ ನಾಲ್ಕು ದಶಕಗಳಿಗೂ ಹೆಚ್ಚುಕಾಲ ಸ್ಕೌಟ್-ಗೈಡ್ ಚಳವಳಿಯ ಬೆಳವಣಿಗೆಯಲ್ಲಿ ಸಕ್ರಿಯವಾಗಿ ಭಾಗವಹಿಸಿ ಸಂಸ್ಥೆಯ ಅಭಿವೃದ್ಧಿಗೆ ಅಹರ್ನಿಶಿ ಸೇವೆ ಸಲ್ಲಿಸುತ್ತಿದ್ದ ರಾಜ್ಯದ ಹಿರಿಯ ಕಬ್ ತರಬೇತು ನಾಯಕರಾಗಿದ್ದ ಶ್ರೀ ಆರ್. ವೆಂಕಣ್ಣನವರು ದೀರ್ಘಕಾಲದ ಅನಾರೋಗ್ಯದಿಂದ ಬೆಂಗಳೂರಿನಲ್ಲಿ ದಿನಾಂಕ 8 ಆಗಸ್ಟ್ 2013 ರಂದು ನಿಧನರಾದರು.

ಬಳ್ಳಾರಿ ಜಿಲ್ಲೆಯ ಸಂಘಟಕರಾಗಿ ಹಲವಾರು ವರ್ಷ ಸೇವೆ ಸಲ್ಲಿಸಿ ವೃತ್ತಿಯಿಂದ ನಿವೃತ್ತರಾದ ನಂತರ ಬಳ್ಳಾರಿ ಜಿಲ್ಲಾ ತರಬೇತಿ ಆಯುಕ್ತರಾಗಿ, ಜಿಲ್ಲಾ ಸ್ಕೌಟ್ ಆಯುಕ್ತರಾಗಿ ಹಾಗು ಇತ್ತೀಚಿನ ವರ್ಷಗಳಲ್ಲಿ ಜಿಲ್ಲಾ ಮುಖ್ಯ ಆಯುಕ್ತರಾಗಿ ಜಿಲ್ಲೆಯ ಸ್ಕೌಟ್-ಗೈಡ್ ಕಾರ್ಯಕ್ರಮಗಳನ್ನು ಹಾಗು ಚಟುವಟಿಕೆಗಳನ್ನು ಹೆಚ್ಚಿಸುವಲ್ಲಿ ಸಾಕಷ್ಟು ಶ್ರಮಿಸುತ್ತಿದ್ದರು. ರಾಜ್ಯ ಸಂಸ್ಥೆಯ ಕಾರ್ಯಕಾರಿ ಸಮಿತಿ ಸದಸ್ಯರಾಗಿ ಹಾಗೂ ರಾಷ್ಟ್ರೀಯ ಸಂಸ್ಥೆಯ ಹಣಕಾಸು ಸಮಿತಿಯ ಚುನಾಯಿತ ಸದಸ್ಯರಾಗಿ, ರಾಜ್ಯದಲ್ಲಿ ಹಾಗೂ ರಾಷ್ಟ್ರೀಯ ಮಟ್ಟದಲ್ಲಿ ಸ್ಕೌಟ್-ಗೈಡ್ ಚಳವಳಿಯ ಅಭಿವೃದ್ಧಿಯ ಬಗ್ಗೆ ಸದಾ ಚಿಂತಿಸುತ್ತಿದ್ದವರಲ್ಲಿ ಅವರೂ ಒಬ್ಬರು. ಅವರ ಸುಧೀರ್ಘ ನಿಸ್ವಾರ್ಥ ಸೇವೆಯನ್ನು ಗುರುತಿಸಿ ರಾಷ್ಟ್ರೀಯ ಸಂಸ್ಥೆಯವರು ವಿಶೇಷ ಸೇವಾ ಪ್ರಶಸ್ತಿ "ಬೆಳ್ಳಿ ನಕ್ಷತ್ರ" ನೀಡಿ ಗೌರವಿಸಿದ್ದರು.

ಅತ್ಯಂತ ಅನಿರೀಕ್ಷಿತವಾಗಿ ದಿನಾಂಕ 18-08-2013 ರ ಬೆಳಿಗ್ಗೆ ನಿಧನರಾದ ರಾಜ್ಯದ ಹಿರಿಯ ಗೈಡ್ ವಿಭಾಗದ ತರಬೇತಿ ನಾಯಕಿಯಾದ ಮೈಸೂರಿನ ಶ್ರೀಮತಿ ಶಾಂತಾ ಗಿರಿಯಣ್ಣ ಅವರು ಕಳೆದ ಐದು ದಶಕಗಳಿಂದ ರಾಜ್ಯದ ಗೈಡ್ ಚಳವಳಿಯ ಬೆಳವಣಿಗೆಗೆ ನಿಸ್ವಾರ್ಥ ಸೇವೆ ಸಲ್ಲಿಸಿದ್ದರು. ಶ್ರೀಮತಿ ಶಾಂತ ಗಿರಿಯಣ್ಣನವರು ಮೈಸೂರು ಜಿಲ್ಲೆಯ ಜಿಲ್ಲಾ ಗೈಡ್ ತರಬೇತಿ ಆಯುಕ್ತರಾಗಿ ಹಾಗೂ ರಾಜ್ಯದ ಗೈಡ್ ವಿಭಾಗದ ತರಬೇತುದಾರರ ಪರವಾಗಿ ರಾಜ್ಯದ ಕಾರ್ಯಕಾರಿ ಸಮಿತಿಯ ಸದಸ್ಯರಾಗಿ ಸೇವೆ ಸಲ್ಲಿಸುತ್ತಿದ್ದರು. ಅವರು ಚಳವಳಿಗೆ ಸಲ್ಲಿಸಿದ ಸುದೀರ್ಘ ಹಾಗು ನಿಸ್ವಾರ್ಥ ಸೇವೆಯನ್ನು ಗುರುತಿಸಿ ರಾಷ್ಟ್ರೀಯ ಸಂಸ್ಥೆಯಿಂದ ವಿಶಿಷ್ಟ ಸೇವಾ ಪ್ರಶಸ್ತಿ "ಬೆಳ್ಳಿ ನಕ್ಷತ್ರ" ನೀಡಿ ಗೌರವಿಸಿದ್ದರು. ಇದಲ್ಲದೆ ಏಶಿಯಾ ಪೆಸಿಫಿಕ್ ವಿಭಾಗದ ಗೈಡ್ ವಿಶಿಷ್ಟ ಸೇವಾ ಪ್ರಶಸ್ತಿ ಹಾಗೂ ಗೌರವವನ್ನು ಸನ್ಮಾನ್ಯ ರಾಜ್ಯಪಾಲರಿಂದ ಪಡೆದಿರುತ್ತಾರೆ. ರಾಜ್ಯದ ಯಾವುದೇ ಜಿಲ್ಲೆಯಲ್ಲಿ ತರಬೇತಿಗಳು-ಸಮಾವೇಶಗಳು ಜರುಗಿದಾಗ ಸದಾ ಕ್ರಿಯಾಶೀಲವಾಗಿ ಸ್ಪಂದಿಸಿ ಸಹಕರಿಸುತ್ತಿದ್ದ ರಾಜ್ಯದ ಹಿರಿಯ ತರಬೇತುದಾರರಾಗಿದ್ದ ಶ್ರೀಮತಿ ಶಾಂತಾ ಗಿರಿಯಣ್ಣ ಅವರ ಅಕಾಲಿಕ ನಿಧನ ಸ್ಕೌಟ್-ಗೈಡ್ ಚಳವಳಿಗೆ ನಷ್ಟವುಂಟಾಗಿದೆ. ಅಗಲಿದ ಇಬ್ಬರು ಹಿರಿಯ ಚೇತನಗಳಿಗೆ ರಾಜ್ಯ ಸಂಸ್ಥೆಯ ಪರವಾಗಿ ಅವರುಗಳ ಆತ್ಮಕ್ಕೆ ಚಿರಶಾಂತಿಯನ್ನು ಹಾಗು ಅವರ ಬಂಧುಗಳಿಗೆ ಅಗಲಿಕೆಯ ನೋವನ್ನು ಭರಿಸಲು ಶಕ್ತಿಕೊಡಲೆಂದು ಭಗವಂತನಲ್ಲಿ ಪ್ರಾರ್ಥಿಸುತ್ತೇನೆ.

ರಾಜ್ಯ ಸಂಸ್ಥೆಯು ಜೂನ್ ಮತ್ತು ಜುಲೈ ತಿಂಗಳುಗಳಲ್ಲಿ ಏರ್ಪಡಿಸಿದ ಜಿಲ್ಲಾ ಸಂಘಟನಾಧಿಕಾರಿಗಳ ಸಭೆ ಹಾಗೂ ಜಿಲ್ಲಾ ಮಟ್ಟದ ಆಯುಕ್ತರುಗಳ, ಕಾರ್ಯದರ್ಶಿಗಳ ಸಮಾವೇಶದಲ್ಲಿ ಹಲವಾರು ಪ್ರಚಲಿತ ವಿಷಯಗಳ ಬಗ್ಗೆ ವಿವರವಾಗಿ ಚರ್ಚಿಸಲಾಗಿದೆ.

ಹೋದವರ್ಷ 2012-13ರಲ್ಲಿ ಬಹಳಷ್ಟು ಜಿಲ್ಲೆಗಳು ಮೂಲ ತರಬೇತಿ ಶಿಬಿರಗಳನ್ನು ಆಯೋಜಿಸುವಲ್ಲಿ ವಿಫಲವಾಗಿದ್ದವು. ಆದುದರಿಂದ ರಾಜ್ಯ ಸಂಸ್ಥೆ ಜಿಲ್ಲೆಗಳಿಗೆ ನೀಡಿದ ದಳ-ಘಟಕಗಳ ನೋಂದಣಿಯ ಸಂಖ್ಯೆಯನ್ನು ತಲುಪಲು ಆಗಿಲ್ಲ. ಮೇಲ್ಕಂಡ ಎರಡು ರಾಜ್ಯ ಮಟ್ಟದ ಸಭೆಯಲ್ಲಿ ಈ ವಿಚಾರವಾಗಿ ಸಾಕಷ್ಟು ಚರ್ಚಿಸಿ ನಾವೆಲ್ಲರೂ ಒಟ್ಟಾಗಿ ತೀರ್ಮಾನಿಸಿದಂತೆ, ರಾಜ್ಯದ ಎಲ್ಲಾ 32 ಜಿಲ್ಲಾ ಸಂಸ್ಥೆಗಳೂ ಮೂಲ ತರಬೇತಿ ಶಿಬಿರಗಳನ್ನು ಸೆಪ್ಟೆಂಬರ್/ ಅಕ್ಟೋಬರ್ 2013 ರ ಒಳಗಾಗಿ ಏರ್ಪಡಿಸಬೇಕೆಂದು ತೀರ್ಮಾನಿಸಿರುವುದು ನಿಮಗೆಲ್ಲಾ ಗೊತ್ತಿರುವ ವಿಷಯ.

ರಾಜ್ಯ ಸಂಸ್ಥೆಯು ಈಗಾಗಲೇ ಹಲವು ಸಭೆ-ಸಮಾರಂಭಗಳಲ್ಲಿ ತಿಳಿಸಿರುವಂತೆ- ಯಾವ ಯಾವ ಜಿಲ್ಲೆಗಳು ಯಾವುದೇ ಹಣವನ್ನು ಶಾಲೆಗಳಿಂದ ತರಬೇತಿ ಶಿಬಿರಗಳಿಗೆ ಜಿಲ್ಲೆಯ ಡಿ.ಡಿ.ಪಿ.ಐ.ಗಳಿಂದ ಆದೇಶ ಪಡೆದು, ಶಿಬಿರಗಳ ಖರ್ಚು ವೆಚ್ಚಗಳಿಗೆ ಹಣವನ್ನು ವಸೂಲು ಮಾಡದೆ – ಮೂಲ ತರಬೇತಿ ಶಿಬಿರಗಳನ್ನು ಏರ್ಪಡಿಸಿ-ನಂತರದಲ್ಲಿ ರಾಜ್ಯ ಸಂಸ್ಥೆಗೆ ತರಬೇತಿ ಶಿಬಿರದ ಸಂಪೂರ್ಣ ಲೆಕ್ಕಪತ್ರಗಳ ದಾಖಲಾತಿಗಳು – ತರಬೇತಿ ಪಡೆದವರ ವಿವರಗಳ ಜೆರಾಕ್ಸ್ ಪ್ರತಿ ಹಾಗೂ ಈ ಬಗ್ಗೆ ಜಿಲ್ಲೆಯ ಡಿ.ಡಿ.ಪಿ.ಐ., ಅವರು ನೀಡಿದ ಸುತ್ತೋಲೆಯೊಂದಿಗೆ ರಾಜ್ಯ ಸ್ಕೌಟ್ ಮತ್ತು ಗೈಡ್ ವಿಭಾಗಗಳಿಗೆ ಕಳುಹಿಸಿದರೆ ಸಾಧ್ಯವಿರುವ-ಲಭ್ಯವಿರುವ ಹಣಕಾಸಿನ ನೆರವನ್ನು ಸ್ಕೌಟ್-ಗೈಡ್ ವಿಭಾಗಗಳಿಂದ ಕೊಡಲಾಗುವುದು. ಈ ಬಗ್ಗೆ ತರಬೇತಿ ಏರ್ಪಡಿಸುವ ಜಿಲ್ಲೆಗಳು ರಾಜ್ಯದ ಎಸ್.ಓ.ಸಿ.(ಸ್ಕೌಟ್ಸ್) & (ಗೈಡ್ಸ್) ಮತ್ತು ಹೆಚ್.ಎಸ್.ಟಿ.ಸಿ. (ಸ್ಕೌಟ್ಸ್) & ಎಸ್.ಟಿ.ಸಿ.(ಗೈಡ್ಸ್) ಅವರುಗಳೊಂದಿಗೆ ಮಾತನಾಡಿ ನಂತರದಲ್ಲಿ ರಾಜ್ಯ ಸಂಸ್ಥೆಗೆ ತರಬೇತಿ ಬಗ್ಗೆ ಸಂಪೂರ್ಣ ವಿವರಗಳನ್ನು ಸಲ್ಲಿಸಿದಲ್ಲಿ ರಾಜ್ಯ ಸಂಸ್ಥೆಯ ನೆರವನ್ನು ಪಡೆಯಲು ಅನುಕೂಲವಾಗುವುದು. ರಾಜ್ಯದ ಎಲ್ಲಾ ಜಿಲ್ಲಾ ಸಂಸ್ಥೆಗಳು ತಕ್ಷಣ ತರಬೇತಿ ಶಿಬಿರಗಳನ್ನು ಏರ್ಪಡಿಸಬೇಕೆಂದು ಸೂಚಿಸುತ್ತೇನೆ.

ರಾಜ್ಯ ಸಂಸ್ಥೆಯು ಕಳೆದ ಕೆಲವು ವರ್ಷಗಳಿಂದ ದಳ-ಘಟಕ-ಸ್ಥಳೀಯ ಹಾಗು ಜಿಲ್ಲಾ ಸಂಸ್ಥೆಗಳನ್ನು ಸಧೃಡವಾಗಿ ಬೆಳೆಸುವ ಉತ್ಕಟ ಅಪೇಕ್ಷೆಯಿಂದ ಹಲವಾರು ಕ್ರಿಯಾತ್ಮಕ ಕಾರ್ಯಕ್ರಮಗಳು-ತರಬೇತಿಗಳು, ಸಮಾವೇಶಗಳು-ಉತ್ಸವಗಳನ್ನು ರಾಜ್ಯಮಟ್ಟದಲ್ಲಿ ಏರ್ಪಡಿಸಿ ಉಚಿತವಾಗಿ ಹಲವಾರು ತರಬೇತಿಗಳನ್ನು ಏರ್ಪಡಿಸಿದ್ದಾಗ್ಯೂ – ಹಲವಾರು ಜಿಲ್ಲಾ ಸಂಸ್ಥೆಗಳಿಂದ ಕನಿಷ್ಠ ಸಂಖ್ಯೆಯ ಅಭ್ಯರ್ಥಿಗಳನ್ನು ಕಳುಹಿಸಲು ಸಾಧ್ಯವಾಗದಿರುವುದು ಅತ್ಯಂತ ಅಸಮಾಧಾನದ ಸಂಗತಿ. ಇದಲ್ಲದೆ ಇತ್ತೀಚೆಗೆ ರಾಜ್ಯ ಸಂಸ್ಥೆ ಏರ್ಪಡಿಸಿದ ತರಬೇತಿಗಳು-ಉತ್ಸವಗಳು ಹಾಗೂ ಸಮಾವೇಶಗಳಿಗೆ ಹೋಗಿ ಬರುವ ಗರಿಷ್ಠ ಮೊತ್ತವನ್ನು ನೀಡುವ ಬಗ್ಗೆ ನಾವು ನೀಡಿದ ಸುತ್ತೋಲೆಯಲ್ಲಿ ತಿಳಿಸಿದನಂತರವೂ – ರಾಜ್ಯ ಸಂಸ್ಥೆಯ ನಿರೀಕ್ಷೆಯಂತೆ ಭಾಗವಹಿಸದಿರುವುದು-ಜಿಲ್ಲಾ ಸಂಸ್ಥೆಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ಜಿಲ್ಲಾ ಸಂಘಟಕರುಗಳು, ಸಹಾಯಕ ರಾಜ್ಯ ಸಂಘಟನಾ ಆಯುಕ್ತರುಗಳು ಹಾಗೂ ಸ್ಥಳೀಯ ಮತ್ತು ಜಿಲ್ಲಾ ಸಂಸ್ಥೆಗಳ ಪದಾಧಿಕಾರಿಗಳು ವಿಶೇಷವಾಗಿ ಗಮನಹರಿಸಿ ಮುಂದೆ ಜರುಗುವ ರಾಜ್ಯ ಸಂಸ್ತೆಯ ಎಲ್ಲಾ ಕಾರ್ಯಕ್ರಮಗಳಲ್ಲಿ, ಎಲ್ಲಾ ಜಿಲ್ಲಾ ಸಂಸ್ಥೆಗಳ ಒಬ್ಬ ಪ್ರತಿನಿಧಿ ಕಡ್ಡಾಯವಾಗಿ ಭಾಗವಹಿಸುವ ಬಗ್ಗೆ ನಿಮ್ಮಗಳ ಮಟ್ಟದಲ್ಲಿ ಪ್ರತಿಜ್ಞೆ ಮಾಡಬೇಕೆಂದು ಸೂಚಿಸ ಬಯಸುತ್ತೇನೆ.

ತಮ್ಮ ವಿಶ್ವಾಸಿ

ಕೊಂ.ಬ. ಷಣ್ಮುಖಪ್ಪ

ಕೊಂಡಜ್ಜಿ ಬ. ಷಣ್ಮುಖಪ್ಪ

## ಪ್ರಕಟಣಾ ಸಮಿತಿ ಅಧ್ಯಕ್ಷರ ನುಡಿ......

# ಮಾತೇ ಮಾಣಿಕ್ಯ

- ಗೊ.ರು. ಚನ್ನಬಸಪ್ಪ

ಅಧ್ಯಕ್ಷರು, ಪ್ರಕಟಣಾ ಸಮಿತಿ, ಭಾ.ಸ್ಕೌ.ಗೈ

ಮಾತು ಎಂಬ ಶಬ್ದಕ್ಕೆ ನುಡಿ, ಸೊಲ್ಲು, ಉಕ್ತಿ, ಹೇಳಿಕೆ, ಭಾಷೆ, ವಿಷಯ, ಸಂಗತಿ, ಸಂಭಾಷಣೆ, ಆಣೆ, ಪ್ರತಿಜ್ಞೆ, ನಿಶ್ಚಿತಾರ್ಥ, ಅಪವಾದ, ದೂರು, ನಿಂದೆ, ಜಗಳ, ವಾಗ್ವಾದ- ಇವು ನಿಘಂಟಿನಲ್ಲಿರುವ ಅರ್ಥಗಳು. ಅದು ಒಂದೊಂದು ಸಂದರ್ಭದಲ್ಲಿ ಒಂದೊಂದು ಅರ್ಥಪಡೆಯುತ್ತದೆ. ಅದು ಉಕ್ತಿಯಾಗಲೂ ಬಲ್ಲದು; ಯುಕ್ತಿಯಾಗಲೂ ಬಲ್ಲದು. ಅದು ವಾದವೂ ಆಗಬಹುದು; ಅಪವಾದವೂ ಆಗಬಹುದು. ಅದೊಂದು ವಿಶಿಷ್ಟ ವಿರಾಟ್ ಶಕ್ತಿ!

ಮಾನವನ ವ್ಯಕ್ತಿತ್ವವನ್ನು ಅಳೆಯುವ ಮಾಪಕವೆಂದರೆ ಮಾತೇ. ಅವನನ್ನು ಬಿಟ್ಟರೆ ಸೃಷ್ಟಿಯ ಬೇರಾವ ಜೀವರಾಶಿಗೂ ಇಲ್ಲದ ಆಸ್ತಿ ಮಾತು. ಒಂದು ವೇಳೆ ಈ ಮಾತಿನ ಆಸ್ತಿ ಇಲ್ಲವಾಗಿದ್ದರೆ ಮಾನವನೂ ಮೂಕಪ್ರಾಣಿಯಂತಿರಬೇಕಾಗಿತ್ತು. ಮಾನವ ಲೋಕದ ವ್ಯವಹಾರ ನಡೆಯುತ್ತಿರುವುದೇ ಈ ಮಾತಿನ ಬಂಡವಾಳದಿಂದ.

ಯಶಸ್ವಿ ಉದ್ಯಮಿ ಯಾವುದೇ ಉದ್ಯಮದ ಮೇಲೆ ಬಂಡವಾಳ ಹೂಡುವ ಮುನ್ನ ನೂರು ಬಾರಿ ವಿಚಾರ ಮಾಡುತ್ತಾನೆ; ಲೆಕ್ಕಾಚಾರ ಹಾಕುತ್ತಾನೆ. ಆ ಲೆಕ್ಕಾಚಾರ ತಪ್ಪಿತೆಂದರೆ ಹೂಡಿದ ಬಂಡವಾಳ ನಷ್ಟಕ್ಕೆ ಈಡಾಗಿಬಿಡುತ್ತದೆ. ಅಂತೆಯೇ ಮಾತಿನ ಬಳಕೆಯೂ ಕೂಡ. 'ತೂತು ಒಲೆ ಕೆಡಿಸಿತು. ಮಾತು ಮನೆ ಕೆಡಿಸಿತು' ಎಂಬ ಗಾದೆ ಮಾತೇ ಇದೆ. ಮಾತೊಂದು ಬ್ರಹ್ಮಾಂಡ. ನಾವು ಆಡುವ ಮಾತುಗಳಲ್ಲಿ ಎಂತೆಂತಹ ಮಾತುಗಳಿವೆ ನೋಡಿ.

ಅಂತರಂಗದ ಮಾತು, ಅಂತೆ ಕಂತೆ ಮಾತು, ಅಡ್ಡಾದಿಡ್ಡಿ ಮಾತು, ಅತಿಯಾದ ಮಾತು, ಅನಗತ್ಯ ಮಾತು, ಅಣಕದ ಮಾತು, ಅಸಭ್ಯ ಮಾತು, ಉಡಾಫೆ ಮಾತು, ಉಪಯುಕ್ತ ಮಾತು, ಉಳಿಯುವ ಮಾತು, ಎಳೆತದ ಮಾತು, ಎಂಜಲ ಮಾತು, ಒರಟು ಮಾತು, ಒಳ್ಳೆಯ ಮಾತು, ಒಳ ಮಾತು, ಒಪ್ಪದ ಮಾತು, ಕಪಟದ ಮಾತು, ಕಳ್ಳ ಮಾತು, ಕಿವಿಮಾತು, ಕೆಟ್ಟ ಮಾತು, ಕೆಣಕು ಮಾತು, ಕೊಕ್ಕೆ ಮಾತು,

ಕೀಟಲೆ ಮಾತು, ಕ್ರೂರ ಮಾತು, ಗಿಲೀಟು ಮಾತು, ಗುಟ್ಟು ಮಾತು, ಗೊಡ್ಡು ಮಾತು, ಗಟ್ಟಿ ಮಾತು, ಜೊಳ್ಳು ಮಾತು, ಚಕ್ಕಂದದ ಮಾತು, ಚೇಷ್ಟೆ ಮಾತು, ಚುಚ್ಚು ಮಾತು, ಜಾಳು ಮಾತು, ಜೇನು ಮಾತು, ತರಲೆ ಮಾತು, ತಿಳಿಮಾತು, ತುಟಿ ಮಾತು, ತೆರೆದ ಮಾತು, ತೇಲು ಮಾತು, ತೊದಲು ಮಾತು, ತೋರಿಕೆ ಮಾತು, ಹಾರಿಕೆ ಮಾತು, ದಾಕ್ಷಿಣ್ಯದ ಮಾತು, ದಿಟ್ಟ ಮಾತು, ದುಃಖದ ಮಾತು, ನಾಲಗೆ ಮಾತು, ನೀರಸ ಮಾತು, ನೂರೆಂಟು ಮಾತು, ಪಾಪದ ಮಾತು, ಪಿಸು ಮಾತು, ಪೊಳ್ಳು ಮಾತು, ಪೋಕರಿ ಮಾತು, ಪೇಚಿನ ಮಾತು, ಬಣ್ಣದ ಮಾತು, ಬರಿ ಮಾತು, ಬಿಚ್ಚು ಮಾತು, ಬಿಡಿ ಮಾತು, ಬಿಸಿ ಮಾತು, ಬೀಳು ಮಾತು, ಬೋಳು ಮಾತು, ಬೇಳ್ವೆ ಮಾತು, ಮಿಂಚು ಮಾತು, ಮೀರಿದ ಮಾತು, ಮೇರು ಮಾತು, ಸಂಚಿನ ಮಾತು, ಸತ್ಯದ ಮಾತು, ಸಮಾಧಾನದ ಮಾತು, ಸುಳ್ಳು ಮಾತು, ಸಿಟ್ಟಿನ ಮಾತು, ಸಂತೋಷದ ಮಾತು, ಸುದ್ದಿ ಮಾತು, ಶುದ್ಧ ಮಾತು, ಶೂರ ಮಾತು, ಸಂಶಯದ ಮಾತು, ಸುಖದ ಮಾತು, ಹಮ್ಮಿನ ಮಾತು, ಹೊರಳಿಕೆ ಮಾತು, ಹೇಸಿ ಮಾತು, ಹುಚ್ಚು ಮಾತು, ಹೆಚ್ಚು ಮಾತು ಇತ್ಯಾದಿ.

ಹಾಗೆಯೇ ಬೆಣ್ಣೆ ಮಾತು, ಬೆಲ್ಲದ ಮಾತು, ಬುರುಡೆ ಮಾತು, ಮರ್ಮದ ಮಾತು, ಮೂದಲಿಕೆ ಮಾತು, ಮನಸ್ವೀ ಮಾತು, ಮರೆ ಮಾತು, ಮುಳ್ಳು ಮಾತು, ಮೇಲು ಮಾತು, ಮೋಸದ ಮಾತು, ರಂಗಿನ ಮಾತು, ರಂಜಕ ಮಾತು, ರಗಳೆ ಮಾತು, ಲಲ್ಲೆ ಮಾತು, ವ್ಯಂಗ್ಯದ ಮಾತು, ವಿನಯದ ಮಾತು, ವಕ್ರ ಮಾತು, ವಿಚಿತ್ರ ಮಾತು, ವ್ಯರ್ಥ ಮಾತು, ಸಂತೆ ಮಾತು, ಸಲ್ಲಾಪದ ಮಾತು, ಸೇಡಿನ ಮಾತು, ಸವಿ ಮಾತು, ಸುತ್ತು ಮಾತು, ಹಗುರ ಮಾತು, ಹರಟೆ ಮಾತು, ಮಗುವಿನ ಮಾತು, ದರ್ಪದ ಮಾತು, ದಡ್ಡ ಮಾತು, ಹೇಳುವ ಮಾತು, ಕೇಳುವ ಮಾತು, ಬದುಕುವ ಮಾತು – ಹೀಗೆ ಈ ಪಟ್ಟಿಯನ್ನು ಎಷ್ಟು ಬೇಕಾದರೂ ಬೆಳೆಸಬಹುದು. ಮಾತಿಗೇನು ಬರ?

ಈ ಎಲ್ಲ ಬಗೆಯ ಮಾತುಗಳನ್ನು ಬಲ್ಲ ಮಾತುಗಾರರೂ ಸಾಕಷ್ಟಿರಬಹುದು. 'ಮುತ್ತು ಒಡೆದರೆ ಹೋಯ್ತು, ಮಾತು ಆಡಿದರೆ ಹೋಯ್ತು' ಎಂಬ ಗಾದೆಯಂತೆ ಮಾತಾಡದೆ ಇರುವವರೂ ಇರಬಹುದು. ಏನೇ ಇರಲಿ, ಮಾತನ್ನು ಜೋಪಾನವಾಗಿ ಕಾಪಾಡಿಕೊಂಡು, ಜೋಪಾನವಾಗಿ ಬಳಸಬೇಕು.

ಮಾತಿನ ಮಹತ್ವವನ್ನು ಅರ್ಥಮಾಡಿಕೊಳ್ಳಬೇಕಾದರೆ ಮಾತಿನ ಅಂತರಂಗ – ಬಹಿರಂಗಗಳನ್ನು, ಪರಿಣಾಮ – ಪ್ರಭಾವಗಳನ್ನು, ಪರಿಶುದ್ಧಿ – ಪಾವಿತ್ರ್ಯಗಳನ್ನು ಅರ್ಥಮಾಡಿಕೊಳ್ಳಬೇಕು. ಆದರೂ ನಾವು ಬರಿಯ ಮಾತಿನ ಮಲ್ಲರಾಗಿದ್ದೇವೆ. ಮಿತವರಿಯದ ಅತಿಮಾತುಗಳಿಂದಾಗಿ ಬದುಕಿನ ಹಿತವನ್ನೇ ಕೆಡಿಸಿಕೊಳ್ಳುತ್ತಿದ್ದೇವೆ. ಮಾತು ಬರುತ್ತದೆಂದು ಬಳಸುವುದಲ್ಲ. ಆ ಮಾತಿನಿಂದ ಲೋಕಹಿತ ಸಾಧನೆಯಾಗಬೇಕು.

**ಮಾತು ಕೇವಲ ಎರಡಕ್ಷರದ ಶಬ್ದವಲ್ಲ; ಅದು ಆತ್ಮಕ್ಕೆ ಒಪ್ಪಿಗೆಯಾಗಬೇಕು. ಮಾತು ಮಾಣಿಕ್ಯ!**

# ರಾಜ್ಯ ವಾರ್ತೆ.............

## Asia Pacific Sub-Regional Workshop on National Training Scheme Review was Held in Thailand from 22nd to 25th July 2013

Mr. C.S. Reddy L.T.(S) Hon. State Training Commissioner(S) participated in the workshop representing India. 32 participants from 14 countries participated. Dr. Pratap Senarith of APR was the Director of the workshop. Many subjects related to Training of Adults in the N.S.O.s were discussed.

Some of the Recommendations made by the workshop are as follows

- N.S.O.'s should review the Training Policy at least every 5 years.

- N.S.O.'s should provide clear distinction between Unit Leader Training and Trainer's Training.

- N.S.O.s are encouraged to conduct Training Courses Jointly with other NSO's for exchange of idea.

- N.S.O.s need to include annual statistical data of Adult Trg-Courses with Membership growth.

- N.S.O.s are encorauged to share their best Practices in Training Programme with the APR.

**State Level Training Course**

The following State Level Training Courses were held at Kondajji Basappa Scout Guide Training and Camping Centre Kondajji from 06-08-2013 to 13-08-2013

| Sl. No | Course | Leader | No. of Participants |
|---|---|---|---|
| 01 | Introductory cum Basic Course for Cub Master | Smt. Amruthamma L.T.(C) | 10 |
| 02. | Introductory cum Basic Course for Scout Masters | Sri C.N. Mahesh A.L.T (S.) | 25 |
| 03 | Introductory cum Basic Course for Scout Masters | Sri K.G. Gopala Krishna L.T (S.) | 25 |
| 04 | Advanced Course for Cub Masters | Mrs. Juliana Lasrado L.T. (C) | 06 |
| 05 | Badge Examiner's and Badge Instructors Training Course | Sri V. M . Ramachandra , L.T., (S) | 12 |

Sri C.S. Reddy L.T.(S), Hon. S.T.C. Manitored all the Courses

**ಬೆಳಗಾವಿ ವಿಭಾಗದ ಮಟ್ಟದ ಸಹಾಯಕ ಜಿಲ್ಲಾ ಆಯುಕ್ತರುಗಳ / ಸ್ಥಳೀಯ ಸಂಸ್ಥೆ ಕಾರ್ಯದರ್ಶಿಗಳ / ಸಹಕಾರ್ಯದರ್ಶಿಗಳ / ಖಜಾಂಚಿಗಳ ಸಮಾವೇಶ.**

ದಿನಾಂಕ 29 ರಿಂದ 31 ಜುಲೈ 2013ರವರೆಗೆ ಬೆಳಗಾವಿ ವಿಭಾಗ ಮಟ್ಟದ ಸಹಾಯಕ ಜಿಲ್ಲಾ ಆಯುಕ್ತರುಗಳ / ಸ್ಥಳೀಯ ಸಂಸ್ಥೆ ಕಾರ್ಯದರ್ಶಿಗಳ / ಸಹಕಾರ್ಯದರ್ಶಿಗಳ / ಖಜಾಂಚಿಗಳ ಸಮಾವೇಶವನ್ನು ಗದಗ್ ಜಿಲ್ಲಾ ಸಂಸ್ಥೆ ಹಾಗೂ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ರಾಜ್ಯ ಸಂಸ್ಥೆಯ ಸಹಯೋಗದೊಂದಿಗೆ ಗದಗ್‌ನ ಹೆಚ್.ಕೆ.ಪಾಟೀಲ್ ಸಭಾ ಭವನದಲ್ಲಿ ಏರ್ಪಡಿಸಲಾಗಿತ್ತು.

ಶ್ರೀಯುತ ರಾಜೀವ್ ನಾಯಕ್, ಡಿಡಿಪಿಐ ಮತ್ತು ಜಿಲ್ಲಾ ಮುಖ್ಯ ಆಯುಕ್ತರು, ಗದಗಜಿಲ್ಲೆ ಇವರು ಸಮಾವೇಶದ ಉದ್ಘಾಟನೆಯನ್ನು ದೀಪ ಬೆಳಗಿಸುವುದರ ಮೂಲಕ ನೆರವೇರಿಸಿ ಸಮಾವೇಶ ಯಶಸ್ವಿಯಾಗಲೆಂದು ಹಾರೈಸಿದರು. ಶ್ರೀ ಮುಕುಂದ ಪೋತ್ನೀಸ್, ಜಿಲ್ಲಾ ಆಯುಕ್ತ(ಸ್ಕೌಟ್ಸ್), ಶ್ರೀಮತಿ ಸುಮ ಎಸ್.ಗರಗ್, ಜಿಲ್ಲಾ ಆಯುಕ್ತರು (ಗೈಡ್ಸ್), ಶ್ರೀ ಎಸ್.ಎಸ್.ಗುಜಮಾಗಡಿ, ಜಿಲ್ಲಾ ಕಾರ್ಯದರ್ಶಿ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಹಾಗೂ ಇನ್ನಿತರ ಜಿಲ್ಲಾ ಸಂಸ್ಥೆಯ ಪದಾಧಿಕಾರಿಗಳು ಸಮಾರಂಭದಲ್ಲಿ ಉಪಸ್ಥಿತರಿದ್ದರು.

ಸಮಾವೇಶದ ನೇತೃತ್ವವನ್ನು ಶ್ರೀಮತಿ ಜಾನಕಿ ವೇಣುಗೋಪಾಲ್, ಎಸ್‌ಓಸಿ(ಗೈಡ್ಸ್), ಇವರು ವಹಿಸಿದ್ದರು. ಸಮಾವೇಶದ ಸಂಪನ್ಮೂಲ ವ್ಯಕ್ತಿಗಳಾಗಿ ಶ್ರೀ ಎನ್. ಶ್ರೀನಿವಾಸನ್, ಎಲ್‌ಟಿ(ಎಸ್), ಶ್ರೀ ಎಂ.ಎಂ.ಲೋಂಡೆ, ಎಲ್‌ಟಿ(ಎಸ್), ಸಹಾಯಕ ರಾಜ್ಯ ಆಯುಕ್ತರು(ಸ್ಕೌಟ್ಸ್), ಬೆಳಗಾವಿ ವಿಭಾಗ, ಶ್ರೀಮತಿ ಗೀತಾ ನಟರಾಜ್, ಸಹಾಯಕ ರಾಜ್ಯ ಆಯುಕ್ತರು(ಗೈಡ್ಸ್), ಶ್ರೀಮತಿ ಎಸ್.ಕೆ.ಪ್ರಭಾ, ಎಲ್‌ಟಿ(ಗೈಡ್ಸ್), ಶ್ರೀಮತಿ ಬಿ.ಡಿ.ಶಾಂತ, ಎಲ್‌ಟಿ(ಗೈಡ್ಸ್), ಶ್ರೀ ಎಲ್.ಟಿ.ಲೋಕೇಶ್, ಪ್ರಭಾರಿ ರಾಜ್ಯ ಸಂಘಟನಾ ಆಯುಕ್ತರು (ಸ್ಕೌಟ್ಸ್), ಶ್ರೀ ಜಗದೀಶ್, ಡಿಓಸಿ, ಬಿಜಾಪುರ, ಶ್ರೀ ಷೇಕ್ ಸುರಣಗಿ ಮುಂತಾದವರು ಭಾಗವಹಿಸಿದ್ದರು.

ದಿನಾಂಕ: 30.07.2013ರಂದು ರಾಜ್ಯ ಮುಖ್ಯ ಆಯುಕ್ತರಾದ ಶ್ರೀ ಕೊಂಡಜ್ಜಿ ಬ. ಷಣ್ಮುಖಪ್ಪರವರು ಸಮಾವೇಶಕ್ಕೆ ಭೇಟಿ ನೀಡಿ, ಎಲ್ಲಾ ಶಿಬಿರಾರ್ಥಿಗಳಿಗೆ, ಜಿಲ್ಲಾ ಮತ್ತು ಸ್ಥಳೀಯ ಸಂಸ್ಥೆಗಳ ಬೆಳವಣಿಗೆಗೆ ಅತ್ಯಾವಶ್ಯಕವಾದ ಮಾರ್ಗದರ್ಶನ ನೀಡಿ, ಚಳವಳಿಯ ಬೆಳವಣಿಗೆಗೆ ಶ್ರಮಿಸುವಂತೆ ಕರೆ ನೀಡಿದರು.

ಸಮಾವೇಶದಲ್ಲಿ ಮೂಲಭೂತ ತತ್ವಗಳು, ಇತಿಹಾಸ, ವಯಸ್ಕನಾಯಕರ ಮತ್ತು ಸ್ಕೌಟ್ಸ್-ಗೈಡ್ಸ್ ಪ್ರಗತಿಪರ ಶಿಕ್ಷಣ, ಬ್ಯಾಡ್ಜ್ ಕಮಿಟಿ ರಚನೆ, ಸಹಾಯಕ ಜಿಲ್ಲಾ ಆಯುಕ್ತರುಗಳ / ಖಜಾಂಚಿಗಳ / ಸಹಕಾರ್ಯದರ್ಶಿಗಳ / ಕಾರ್ಯದರ್ಶಿಗಳ ಜವಾಬ್ದಾರಿಗಳು, ಪ್ರಧಾನ ಮಂತ್ರಿಗಳ ಪಾರಿತೋಷಕ ಸ್ಪರ್ಧೆ/ ರಾಜ್ಯಪುರಸ್ಕಾರ ಮತ್ತು ರಾಷ್ಟ್ರಪತಿ ಪುರಸ್ಕಾರ, / ಸ್ಥಳೀಯ ಸಂಸ್ಥೆಗಳ ಕಾರ್ಯಸಮಿತಿ / ಸ್ಥಳೀಯ ಪರಿಷತ್ತು ಸಭೆಗಳ ಕುರಿತು ಮಾಹಿತಿ ನೀಡಿ ಪಾತ್ರಾಭಿನಯ ಮಾಡಿಸಲಾಯಿತು.

ದಿನಾಂಕ: 31.07.2013ರಂದು 2 ಗಂಟೆಗೆ ಸಮಾವೇಶದ ಮುಕ್ತಾಯ ಸಮಾರಂಭವು ಶ್ರೀ ರಾಜೀವ್ ನಾಯಕ್ , ಜಿಲ್ಲಾ ಮುಖ್ಯ ಆಯುಕ್ತರು ಇವರ ಅಧ್ಯಕ್ಷತೆಯಲ್ಲಿ ನಡೆಯಿತು. ಈ ಸಂದರ್ಭದಲ್ಲಿ ಸಮಾವೇಶದ ಯಶಸ್ವಿಗಾಗಿ ಶ್ರಮಿಸಿದ ಎಲ್ಲರನ್ನೂ ಸನ್ಮಾನಿಸಲಾಯಿತು. ಸಮಾವೇಶದಲ್ಲಿ ಗದಗ್, ಬೆಳಗಾಂ, ಹಾವೇರಿ, ಧಾರವಾಡ, ಬಾಗಲಕೋಟೆ, ಬಿಜಾಪುರ, ಶಿರಸಿ, ಕಾರವಾರ, ಕೊಪ್ಪಳ ಜಿಲ್ಲೆಗಳಿಂದ 230 ಶಿಬಿರಾರ್ಥಿಗಳು, ಭಾಗವಹಿಸಿದ್ದರು.

## 9ನೇ ಎಪಿಆರ್ ರೀಜಿನಲ್ ಲೆವೆಲ್ ಜಾಂಬೋರಿ ಆನ್-ದ -ಏರ್/ ಇಂಟರ್ನೆಟ್

ದಿನಾಂಕ: 3ನೇ ಆಗಸ್ಟ್ ರಿಂದ 4ನೇ ಆಗಸ್ಟ್ 2013ರವರೆಗೆ ರಾಜ್ಯ ಕೇಂದ್ರ ಕಾರ್ಯಾಲಯದಲ್ಲಿ 9ನೇ ಏಷಿಯಾ ಫೆಸಿಫಿಕ್ ರೀಜಿನಲ್ ಲೆವೆಲ್ ಜಾಂಬೋರಿ ಆನ್-ದ -ಏರ್ / ಇಂಟರ್ನೆಟ್ ಕಾರ್ಯಕ್ರಮ ಜರುಗಿತು. ಕಾರ್ಯಕ್ರಮದ ಉದ್ಘಾಟನೆಯು ದಿನಾಂಕ: 03.08.2013ರಂದು ಬೆಳಗ್ಗೆ 10.00.ಗಂಟೆಗೆ ನಡೆಯಿತು. ಶ್ರೀ ಎಂ.ಎ.ಚೆಲ್ಲಯ್ಯ, ರಾಜ್ಯ ಜಂಟಿ ಕಾರ್ಯದರ್ಶಿ, (ಸ್ಕೌಟ್ಸ್) ರವರು, ಬೆಂಗಳೂರು ಅಮೆಚ್ಯೂರ್ ರೇಡಿಯೋ ಕ್ಲಬ್‌ನ ಎಲ್ಲಾ ಸದಸ್ಯರನ್ನು ಹಾಗೂ ಸ್ಕೌಟ್ಸ್ / ಗೈಡ್ಸ್‌ಗಳನ್ನು ಸ್ವಾಗತಿಸಿದರು. ಶ್ರೀ ಅಜಯ್ , ಅಧ್ಯಕ್ಷರು. ಅಮೆಚೂರ ರೇಡಿಯೋ ಕ್ಲಬ್ ಶ್ರೀ ರಮೇಶ್ ಕುಮಾರ್.ಕೆ.ಜಿ, ಜನರಲ್ ಸೆಕ್ರೆಟರಿ, ದಳನಾಯಕರು, ನಾಯಕಿಯರು, ಸ್ಕೌಟ್ಸ್/ ಗೈಡ್ಸ್/ ರೋವರ್ಸ್/ರೇಂಜರ್ಸ್‌ಗಳು ಸಮಾರಂಭದಲ್ಲಿ ಉಪಸ್ಥಿತರಿದ್ದರು.

ಈ ಕಾರ್ಯಕ್ರಮದಲ್ಲಿ ಇಂಟರ್ನೆಟ್ ಮುಖಾಂತರ ಸ್ಕೌಟ್ಸ್ / ಗೈಡ್ಸ್‌ಗಳು ರಾಷ್ಟ್ರೀಯ ತರಬೇತಿ ಕೇಂದ್ರ, ಪಚಮಢಿ, ಭೂಪಾಲ್, ದೆಹಲಿ, ಇಂಡೋನೇಷಿಯ, ಮುಂಬಯಿ, ಮಧ್ಯ ಪ್ರದೇಶ್ ರಾಜ್ಯ ಕಾರ್ಯಾಲಯ, ಎನ್‌ವೈಸಿ, ಗಡಪುರಿ. ಮುಂತಾದ ಸ್ಥಳಗಳನ್ನು ಸಂಪರ್ಕಿಸಿ ಕಾರ್ಯಕ್ರಮದ ಶುಭಾಶಯಗಳನ್ನು ಹಂಚಿಕೊಂಡರು.

ಶ್ರೀ ಅಮರ್ ಬಿ.ಛತ್ರಿ, ಸಹ ನಿರ್ದೇಶಕರು, ದಕ್ಷಿಣ ವಲಯ, ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಶ್ರೀ ಅನಲೇಂದ್ರ ಶರ್ಮ, ದಕ್ಷಿಣ ವಲಯ ಸಂಘಟನಾ ಆಯುಕ್ತರು(ಸ್ಕೌಟ್ಸ್) ಕಾರ್ಯಕ್ರಮದಲ್ಲಿ ಉಪಸ್ಥಿತರಿದ್ದರು. ಶ್ರೀ ಎಲ್.ಟಿ.ಲೋಕೇಶ್, ಪ್ರಭಾರಿ ಎಸ್‌ಓಸಿ(ಎಸ್), ಶ್ರೀ ಮಧುಸೂಧನ್, ಸಹಕಾರ್ಯದರ್ಶಿ, ಬೆಂಗಳೂರು ದಕ್ಷಿಣ, ಶ್ರೀ ಎ.ಎಂ.ಶಂಕರ್, ಎಎಸ್‌ಓಸಿ(ಎಸ್), ಬೆಂಗಳೂರು ಉತ್ತರ, ಸಂಯೋಜಕರಾಗಿದ್ದರು,. 214 ಶಿಬಿರಾರ್ಥಿಗಳು ಮತ್ತು ಸಿಬ್ಬಂದಿ ವರ್ಗ ಭಾಗವಹಿಸಿದ್ದರು.

## ರಾಜ್ಯ ಕೇಂದ್ರ ಕಾರ್ಯಾಲಯದಲ್ಲಿ 67ನೇ ಸ್ವಾತಂತ್ರ್ಯ ದಿನಾಚರಣೆ

ದಿನಾಂಕ 15-08-2013 ರಂದು 67ನೇ ಸ್ವಾತಂತ್ರ್ಯ ದಿನಾಚರಣೆಯನ್ನು ರಾಜ್ಯ ಕೇಂದ್ರ ಕಾರ್ಯಾಲಯದ ಆವರಣದಲ್ಲಿ ಆಚರಿಸಲಾಯಿತು. ರಾಜ್ಯ ಮುಖ್ಯ ಆಯುಕ್ತರಾದ ಶ್ರೀ ಕೊಂಡಜ್ಜಿ ಬ. ಷಣ್ಮುಖಪ್ಪ ಅವರು ಬೆಳಿಗ್ಗೆ 9.00 ಗಂಟೆಗೆ ಸರಿಯಾಗಿ ರಾಷ್ಟ್ರಧ್ವಜವನ್ನು ಅರಳಿಸಿದರು. ಈ ಸಂದರ್ಭದಲ್ಲಿ ಅವರು ಮಾತನಾಡುತ್ತಾ ಸ್ಕೌಟ್ಸ್-ಗೈಡ್ಸ್‌ಗಳಿಗೆ ಸ್ವಾತಂತ್ರ್ಯೋತ್ಸವದ ಬಗ್ಗೆ ಸಂದೇಶ ನೀಡಿದರು. ಶ್ರೀ ಎಂ.ಎ. ಚೆಲ್ಲಯ್ಯ ಜಂಟಿ ರಾಜ್ಯ ಕಾರ್ಯದರ್ಶಿ (ಸ್ಕೌಟ್) ಶ್ರೀಮತಿ ಜಾನಕಿ ವೇಣುಗೋಪಾಲ್ ರಾಜ್ಯ ಸಂಘಟನಾ ಆಯುಕ್ತೆ(ಗೈಡ್), ಹಿರಿಯ ಸದಸ್ಯರು ಹಾಗೂ ಪ್ರತಿವರ್ಷ ಬಹುಮಾನ ನೀಡುತ್ತಿರುವ ಶ್ರೀ ಕೆ.ವಿ. ಕೃಷ್ಣಸ್ವಾಮಿ ರಾವ್, ಮಿಸ್ ಕೆ. ಮನೋಹರ ಮಾಜಿ ಕೇಂದ್ರ ಸ್ಥಾನಿಕ ಆಯುಕ್ತೆ(ಗೈಡ್), ಶ್ರೀ ಕೆ. ತಿಮ್ಮಪ್ಪ, ಕೇಂದ್ರ ಸ್ಥಾನಿಕ ಆಯುಕ್ತರು(ಸ್ಕೌಟ್) ಶ್ರೀ ಆರ್.ಡಿ. ಮೂರ್ತಿ ರಾಜ್ಯ ಪರಿಷತ್ ಸದಸ್ಯರು, ಶ್ರೀ ಎಲ್.ಟಿ. ಲೋಕೇಶ್ ಪ್ರಭಾರಿ ರಾಜ್ಯ ಸಂಘಟನಾ ಆಯುಕ್ತ (ಸ್ಕೌಟ್), ಶ್ರೀ ಎಂ. ಶ್ರೀನಿವಾಸ್ ಶ್ರೀ ಮಧುಸೂದನ್ ಹಾಗೂ ಇತರ ರಾಜ್ಯ ಹಾಗೂ ಜಿಲ್ಲಾ ಪದಾಧಿಕಾರಿಗಳು ಮತ್ತು ಪೋಷಕರು ಕಾರ್ಯಕ್ರಮದಲ್ಲಿ ಭಾಗವಹಿಸಿದ್ದರು.

ಬೆಂಗಳೂರು ದಕ್ಷಿಣ ಹಾಗೂ ಉತ್ತರ ಜಿಲ್ಲೆಗಳಿಂದ ಸುಮಾರು 300 ಕಬ್ಸ್-ಬುಲ್‌ಬುಲ್ಸ್, ಸ್ಕೌಟ್ಸ್-ಗೈಡ್ಸ್, ರೋವರ್ಸ್-ರೇಂಜರ್ಸ್ ಕಾರ್ಯಕ್ರದಲ್ಲಿ ಭಾಗವಹಿಸಿದ್ದರು.

ಬೆಂಗಳೂರು ಫೀಲ್ಡ್ ಮಾರ್ಷಲ್ ಮಾಣಿಕ್‌ಷಾ ಕವಾಯಿತು ಮೈದಾನದಲ್ಲಿ ನಡೆದ ಸ್ವಾತಂತ್ರ್ಯ ದಿನಾಚರಣೆಯಲ್ಲಿ ಬೆಂಗಳೂರು ಉತ್ತರ ಜಿಲ್ಲೆಯ ವಿದ್ಯಾಮಂದಿರ, ಮಲ್ಲೇಶ್ವರಂ ಶಾಲೆಯ ಸ್ಕೌಟ್ಸ್‌ಗಳು ಕ್ಲೂನಿ ಕಾನ್ವೆಂಟ್, ಜಾಲಹಳ್ಳಿ ಶಾಲೆಯ ಗೈಡ್ಸ್‌ಗಳು ಪಥಸಂಚಲನ ಕಾರ್ಯಕ್ರಮದಲ್ಲಿ ಭಾಗವಹಿಸಿದ್ದರು.

# ಜಿಲ್ಲಾ ವಾರ್ತೆಗಳು

## ಶಿವಮೊಗ್ಗ

ದಿನಾಂಕ 27-07-2013 ಮತ್ತು 28-07-2013ರಂದು ಶಿವಮೊಗ್ಗ ಸ್ಥಳೀಯ ಸಂಸ್ಥೆ ಮತ್ತು ಭಾರತೀಯ ವಿದ್ಯಾಭವನದ ಸಂಯುಕ್ತ ಆಶ್ರಯದಲ್ಲಿ ರಾಜ್ಯ ಪುರಸ್ಕಾರ/ಪ್ರವೇಶ ಪೂರ್ವ ಮಾಹಿತಿ ಶಿಬಿರವನ್ನು ಭಾರತೀಯ ವಿದ್ಯಾಭವನದ ಶಾಲೆಯ ಆವರಣದಲ್ಲಿ ಏರ್ಪಡಿಸಲಾಗಿತ್ತು. ಶಿಬಿರದ ಉದ್ಘಾಟನೆಯನ್ನು ದಿನಾಂಕ 27-07-2013 ರಂದು ಭಾರತೀಯ ವಿದ್ಯಾಭವನದ ಉಪಾಧ್ಯಕ್ಷ ಹಾಗೂ ಶಿವಮೊಗ್ಗ ನಗರದ ಪ್ರಸಿದ್ಧ ಕೈಗಾರಿಕೋದ್ಯಮಿಯಾದ ಶ್ರೀ ಬಿ.ಸಿ. ನಂಜುಂಡಶೆಟ್ಟರು ಗಿಡಕ್ಕೆ ನೀರೆರೆಯುವುದರ ಮೂಲಕ ನೆರವೇರಿಸಿದರು. ಸ್ಕೌಟ್ ಮತ್ತು ಗೈಡ್‌ಗಳಿಗೆ ಚಳವಳಿಯ ಬೆಳವಣಿಗೆ ಮತ್ತು ಸಂಸ್ಥೆಯ ಹುಟ್ಟಿನ ಬಗ್ಗೆ ಮಾಹಿತಿ ನೀಡಿದರು. ನಂತರ ಶ್ರೀ ದಿವಾಕರ, ಅಧ್ಯಕ್ಷರು ಭಾರತೀಯ ವಿದ್ಯಾಭವನ ಟ್ರಸ್ಟ್ ಇವರು, ಶಿಬಿರಾಗ್ನಿ ಕಾರ್ಯಕ್ರಮವನ್ನು ಉದ್ಘಾಟಿಸಿದರು. ಈ ಸಂದರ್ಭದಲ್ಲಿ ಭಾರತೀಯ ವಿದ್ಯಾಭವನದ ಪ್ರಾಚಾರ್ಯರಾದ ಶ್ರೀಮತಿ ಇಂದು ಜಿ.ವಿ. ಉಪಸ್ಥಿತರಿದ್ದರು. ಶಿವಮೊಗ್ಗ ಸ್ಥಳೀಯ ಸಂಸ್ಥೆಯ ಕಾರ್ಯಾಧ್ಯಕ್ಷರು ಹಾಗೂ ಕೈಗಾರಿಕೋದ್ಯಮಿಯಾದ ಶ್ರೀ ಎಸ್. ಉಮೇಶ್ ಅವರು ಕಾರ್ಯಕ್ರಮವ ಅಧ್ಯಕ್ಷತೆಯನ್ನು ವಹಿಸಿದ್ದರು. ಸ್ಕೌಟ್-ಗೈಡ್‌ಗಳು ಹಲವಾರು ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ಇದೇ ಸಂದರ್ಭದಲ್ಲಿ ನಡೆಸಿಕೊಟ್ಟರು.

ದಿನಾಂಕ 28-07-2013 ರ ಕಾರ್ಯಕ್ರಮವು ಬೆಳಗಿನ ಬಿ.ಪಿ.ಸಿಕ್ಸ್ ವ್ಯಾಯಾಮದೊಂದಿಗೆ ಪ್ರಾರಂಭವಾಯಿತು. ಸರ್ವಧರ್ಮ ಪ್ರಾರ್ಥನೆ, ಮುಂಜಾನೆ ಪರಿವೀಕ್ಷಣೆ, ಧ್ವಜಾರೋಹಣ ಕಾರ್ಯಕ್ರಮ ನಡೆಸಲಾಯಿತು. ತದನಂತರ ಬೆಳಗ್ಗೆ 9 ರಿಂದ 1 ಗಂಟೆಯವರೆಗೆ ರಾಜ್ಯ ಪುರಸ್ಕಾರ ಅರ್ಹತೆಯಿರುವ ಸ್ಕೌಟ್ - ಗೈಡ್‌ಗಳಿಗೆ ಕೌಶಲ ವಿಷಯಗಳ ಬಗ್ಗೆ ಮಾಹಿತಿ ನೀಡಲಾಯಿತು. ಬಗ್ಗೆ, ಇದೇ ಸಂದರ್ಭದಲ್ಲಿ ಪ್ರವೇಶ ಹಂತದ ಸ್ಕೌಟ್ ಮತ್ತು ಗೈಡ್‌ಗಳಿಗೆ ವಿವಿಧ ವಿಷಯಗಳ ಬಗ್ಗೆ ಮಾಹಿತಿ ನೀಡಲಾಯಿತು.

ಸಂಜೆ 3 ಗಂಟೆಗೆ ಮುಕ್ತಾಯ ಸಮಾರಂಭವನ್ನು ಆಯೋಜಿಸಲಾಗಿತ್ತು. ಶ್ರೀಮತಿ ಇಂಧು ಜಿ.ವಿ. ಪ್ರಾಚಾರ್ಯರು ಭಾರತೀಯ ವಿದ್ಯಾಭವನ, ಇವರು ಮುಖ್ಯ ಅತಿಥಿಗಳಾಗಿ ಆಗಮಿಸಿದ್ದರು. ಶ್ರೀಮತಿ ಅಶ್ವಿನಿ ಪಿಳ್ಳೈ, ಸಮನ್ವಯಾಧಿಕಾರಿಗಳು ಉಪಸ್ಥಿತರಿದ್ದರು. ಶ್ರೀ ಎಸ್. ಉಮೇಶ್, ಕಾರ್ಯಾಧ್ಯಕ್ಷರು, ಸ್ಥಳೀಯ ಸಂಸ್ಥೆ ಇವರು ಅಧ್ಯಕ್ಷತೆ ವಹಿಸಿದ್ದರು.

ಶಿಬಿರದ ವರದಿಯನ್ನು ನಾಯಕರಾದ ಶ್ರೀ ರಾಜೇಶ್ ಎ.ವಿ. ಅವರು ಮಂಡಿಸಿದರು. ಸ್ಕೌಟ್-ಗೈಡ್‌ಗಳು ತಮ್ಮ ಅನಿಸಿಕೆ ಹಂಚಿಕೊಂಡರು. ಶಿಬಿರದಲ್ಲಿ 190 ಸ್ಕೌಟ್-ಗೈಡ್‌ಗಳು ಭಾಗವಹಿಸಿದ್ದರು. ಶಿಬಿರದ ನಾಯಕರಾಗಿ ಶಿವಮೊಗ್ಗ ಸ್ಥಳೀಯ ಸಂಸ್ಥೆಯ ಸಹಕಾರ್ಯದರ್ಶಿಗಳಾದ ಶ್ರೀ ರಾಜೇಶ ಎ.ವಿ., ಶ್ರೀ ಎಚ್. ಶಿವಶಂಕರ್ ಜಿಲ್ಲಾ ತರಬೇತಿ ಆಯುಕ್ತರು (ಸ್ಕೌಟ್) ಮಾರ್ಗದರ್ಶಕರಾಗಿ ಕಾರ್ಯ ನಿರ್ವಹಿಸಿದರು. ಶ್ರೀ ಡಿ. ಎನ್. ನೂರ ಅಹಮದ ಕಾರ್ಯದರ್ಶಿ, ಸ್ಥಳೀಯ ಸಂಸ್ಥೆ ಇವರು, ಶಿಬಿರದ ಸಂಚಾಲಕರಾಗಿ ಕಾರ್ಯ ನಿರ್ವಹಿಸಿದರು. ಸ್ಥಳೀಯ ಸಂಸ್ಥೆಯ ಸಹಾಯಕ ಜಿಲ್ಲಾ ಆಯುಕ್ತರು (ಸ್ಕೌ) ಶ್ರೀ ಎಸ್.ಟಿ.ಎಸ್. ವರ್ಮ ಅವರು, ಹಿಂದಿನ ಕಾರ್ಯದರ್ಶಿ ಶ್ರೀ ವೈ.ಆರ್. ವೀರೇಶಪ್ಪನವರು ಶಿಬಿರಕ್ಕೆ ಭೇಟಿ ಕೊಟ್ಟು ಸ್ಕೌಟ್-ಗೈಡ್‌ಗಳಿಗೆ ಶುಭ ಹಾರೈಸಿದರು.

## ಚಿತ್ರದುರ್ಗ

ಇತ್ತೀಚೆಗೆ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಜಿಲ್ಲಾ ಸಂಸ್ಥೆ, ಚಿತ್ರದುರ್ಗ ಹಾಗೂ ಶ್ರೀ ತರಳಬಾಳು ಜಗದ್ಗುರು ವಿದ್ಯಾಸಂಸ್ಥೆ ಬೃಹನ್ಮಠ ಸಿರಿಗೆರೆ ಇವರ ಸಂಯುಕ್ತ ಆಶ್ರಯದಲ್ಲಿ ತರಳಬಾಳು ವಿದ್ಯಾ ಸಂಸ್ಥೆಯ ಶಿಕ್ಷಕ-ಶಿಕ್ಷಕಿಯರಿಗಾಗಿ ಒಂದು ದಿನದ ಸಾಮಾನ್ಯ ಮಾಹಿತಿ ಶಿಬಿರವನ್ನು ಶ್ರೀ ಲಿಂಗಯ್ಯ ವಸತಿ ಶಾಲೆ ಸಿರಿಗೆರೆಯಲ್ಲಿ ಆಯೋಜಿಸಲಾಗಿತ್ತು. ಶಿಬಿರದಲ್ಲಿ 200 ಶಿಕ್ಷಕ ಮತ್ತು ಶಿಕ್ಷಕಿಯರು ಭಾಗವಹಿಸಿದ್ದರು.

ಶಿಬಿರದ ಉದ್ಘಾಟನೆಯನ್ನು ಶ್ರೀ ಎಸ್.ಬಿ. ರಂಗನಾಥ ಆಡಳಿತಾಧಿಕಾರಿಗಳು, ತರಳಬಾಳು ಜಗದ್ಗುರು ವಿದ್ಯಾಸಂಸ್ಥೆ, ಬೃಹನ್ಮಠ, ಸಿರಿಗೆರೆ ಇವರು ನೆರವೇರಿಸಿಕೊಟ್ಟರು. ಸಾಮಾನ್ಯ ಮಾಹಿತಿ ಶಿಬಿರದ ನಾಯಕರಾಗಿ ಶ್ರೀ ಚಿನ್ನಸ್ವಾಮಿ ರೆಡ್ಡಿ, ರಾಜ್ಯ ತರಬೇತಿ ಆಯುಕ್ತರು ಕಾರ್ಯನಿರ್ವಹಿಸಿದರು. ಶ್ರೀಮತಿ ಜಾನಕಿ ವೇಣುಗೋಪಾಲ್ ರಾಜ್ಯ ಸಂಘಟನಾ ಆಯುಕ್ತರು, ಶ್ರೀ ಜಿ.ಎಸ್. ಚಂದ್ರಪ್ರಕಾಶ್ ಜಿಲ್ಲಾ ತರಬೇತಿ ಆಯುಕ್ತರು, ಶ್ರೀಮತಿ ಮಂಜುಳಾ ಸಿ. ರಾಜ್ಯ ಸಹಾಯಕ ಸಂಘಟನಾ ಆಯುಕ್ತರು. ಸಂಪನ್ಮೂಲ ವ್ಯಕ್ತಿಗಳಾಗಿ ಕಾರ್ಯನಿರ್ವಹಿಸಿದರು.

ಮಧ್ಯಾಹ್ನದ ಅವಧಿಯ ನಂತರ ಶ್ರೀ ಕೊಂಡಜ್ಜಿ ಬ. ಷಣ್ಮುಖಪ್ಪ, ರಾಜ್ಯ ಮುಖ್ಯ ಆಯುಕ್ತರು ಶಿಕ್ಷಕರೊಂದಿಗೆ ಸಂವಾದ ನಡೆಸಿದರು ಹಾಗೂ ವಿದ್ಯಾ ಸಂಸ್ಥೆ ಮತ್ತು ಆಡಳಿತಾಧಿಕಾರಿಗಳಿಗೆ ಅಭಿನಂದನೆಗಳನ್ನು ಸಲ್ಲಿಸಿದರು.

ಮುಕ್ತಾಯ ಸಮಾರಂಭದ ವೇದಿಕೆಯಲ್ಲಿ ಶ್ರೀ ಬಸವರಾಜು, ಮುಖ್ಯೋಪಾಧ್ಯಾಯರು, ಶ್ರೀ ಲಿಂಗಯ್ಯ, ವಸತಿ ಪ್ರೌಢಶಾಲೆ ಸಿರಿಗೆರೆ, ಶ್ರೀ ಕೃಷ್ಣಮೂರ್ತಿಶೆಟ್ಟಿ, ವಲಯ ಆಡಳಿತಾಧಿಕಾರಿಗಳು, ಸಿರಿಗೆರೆ, ಶ್ರೀಮತಿ ಹೇಮಂತಿನಿ ಪ್ರಕಾಶ್, ಜಿಲ್ಲಾ ಗೈಡ್ ಆಯುಕ್ತರು, ಶ್ರೀ ಸುರೇಶರಾಜು, ಜಿಲ್ಲಾ ಸ್ಕೌಟ್ ಆಯುಕ್ತರು, ಶ್ರೀ ಎ.ಬಿ. ವಾರದ ಜಿಲ್ಲಾ ಕಾರ್ಯದರ್ಶಿಗಳು, ಶ್ರೀಮತಿ ಸಿ.ಪಿ. ಸುಶೀಲ, ಜಿಲ್ಲಾ ತರಬೇತಿ ಗೈಡ್ ಆಯುಕ್ತರು, ಉಪಸ್ಥಿತರಿದ್ದರು.

## ಕೊಪ್ಪಳ

ದಿನಾಂಕ: 27-07-2013 ರಂದು ಕಾನೂನು ಅರಿವು ನೆರವು ಹಾಗೂ ಕಾನೂನು ವಿದ್ಯಾ ಪ್ರಸಾರ ಕಾರ್ಯಕ್ರಮವು ಸರಕಾರಿ ಪದವಿ ಪೂರ್ವಕಾಲೇಜಿನಲ್ಲಿ ನಡೆಯಿತು. ಇದರ ಮುಖ್ಯ ಅತಿಥಿಗಳಾಗಿ ಕೊಪ್ಪಳ ಜಿಲ್ಲೆಯ ಜಿಲ್ಲಾ ಸತ್ರ ನ್ಯಾಯಾಧೀಶರು ವಹಿಸಿದ್ದರು. ಈ ಕಾರ್ಯಕ್ರಮದಲ್ಲಿ ಅಧಿಕ ಸಂಖ್ಯೆಯಲ್ಲಿ ಸ್ಕೌಟ್‌ಗಳು ಭಾಗವಹಿಸಿದ್ದರು.

********

ದಿನಾಂಕ 07-07-2013 ರಂದು ಭಾನುವಾರ ಗವಿಮಠ ಕೊಪ್ಪಳ ಹಾಗೂ ಶಾರದಾ ಪ್ರಾಥಮಿಕ ಪ್ರೌಢಶಾಲೆ, ಭಾರತ್ ಸ್ಕೌಟ್ಸ್-ಗೈಡ್ಸ್ ಜಿಲ್ಲಾ ಸಂಸ್ಥೆ ಸಂಯುಕ್ತಾಶ್ರಯದಲ್ಲಿ ವನಮಹೋತ್ಸವವನ್ನು ಆಚರಿಸಲಾಯಿತು. ಈ ಕಾರ್ಯಕ್ರಮದ ಅಧ್ಯಕ್ಷತೆಯನ್ನು ಗವಿಮಠದ ಸ್ವಾಮೀಜಿಯವರು ವಹಿಸಿದ್ದರು. ನಂತರ ಶಾರದಾ ಶಾಲೆಯ ಆವರಣದಲ್ಲಿ ಸ್ಕೌಟ್ಸ್-ಗೈಡ್ಸ್‌ಗಳು ಸಸಿಗಳನ್ನು ನೆಟ್ಟರು. ಇದರಲ್ಲಿ ಶಾರದಾ ಶಾಲೆಯ

ಮುಖ್ಯೋಪಾಧ್ಯಾಯರಾದ ಶ್ರೀ ಮಲ್ಲಿಕಾರ್ಜುನ ಹಾಗೂ ಸ್ಕೌಟ್ ಮಾಸ್ಟರ್, ಗೈಡ್ ಕ್ಯಾಪ್ಟನ್ ಸಿಬ್ಬಂದಿ ವರ್ಗ ಹಾಗೂ ಸ್ಕೌಟ್ಸ್ ಮತ್ತು ಗೈಡ್ಸ್ ಭಾಗವಹಿಸಿದ್ದರು.

**************

ದಿನಾಂಕ 31-07-2013 ರಂದು ಸರಕಾರಿ ಪದವಿ ಪೂರ್ವ ಕಾಲೇಜಿನಲ್ಲಿ ಒಂದು ದಿನದ ಸ್ವಚ್ಛತಾ ಶಿಬಿರ ಕಾರ್ಯಕ್ರಮವನ್ನು ನಡೆಸಲಾಯಿತು. ಇದರ ಅತಿಥಿ ಸ್ಥಾನವನ್ನು ಪದವಿಪೂರ್ವ ಕಾಲೇಜಿನ ಉಪ ಪ್ರಾಂಶುಪಾಲರು ವಹಿಸಿದ್ದರು. ಅವರು ಮಾತನಾಡುತ್ತಾ ಇದೇ ರೀತಿ ತಿಂಗಳಿಗೆ 2-3 ಶಿಬಿರಗಳನ್ನು ನೆಡೆಸುತ್ತಿದ್ದರೆ ಸಾರ್ವಜನಿಕರಿಗೆ ಹಾಗು ಸ್ಕೌಟ್ಸ್-ಗೈಡ್ಸ್‌ಗಳಿಗೆ ಸ್ವಚ್ಛತೆಯ ಬಗ್ಗೆ ಅರಿವು ಮೂಡುತ್ತದೆ ಎಂದರು. ನಿರೂಪಣೆಯನ್ನು ಶ್ರೀ ಎಸ್.ಎನ್. ಪಾಟೀಲ ಸ್ಕೌಟ್ ಮಾಸ್ಟರ್ ಹಾಗೂ ವಂದನಾರ್ಪಣೆಯನ್ನು ಶ್ರೀ ಎ.ಎಸ್. ಶಿವಕುಮಾರ ಎ.ಎಸ್.ಓ.ಸಿ.,(ಎಸ್.) ರವರುಗಳು ಮಾಡಿದರು. ಇದರ ನೇತೃತ್ವವನ್ನು ಶ್ರೀ ಎಸ್.ಎನ್. ಪಾಟೀಲ ಸ್ಕೌಟ್ ಮಾಸ್ಟರ್ ವಹಿಸಿದ್ದರು.

*************

ದಿನಾಂಕ 30-07-2013 ರಂದು ಮಾನ್ಯ ಮೋಹನರಾಜ ರವರು ಕೊಪ್ಪಳ ಜಿಲ್ಲೆಯ ನೂತನ ಜಿಲ್ಲಾಧಿಕಾರಿಗಳಾಗಿ ಅಧಿಕಾರ ವಹಿಸಿಕೊಂಡರು. ಜಿಲ್ಲಾ ಪದಾಧಿಕಾರಿಗಳು ಶ್ರೀಯುತರನ್ನು ಭೇಟಿ ಮಾಡಿ ಸ್ವಾಗತ ಕೋರಿದರು.

*************

ದಿನಾಂಕ 15-08-2013 ಸ್ವಾತಂತ್ರ್ಯ ದಿನಾಚರಣೆಯನ್ನು ಶಾರದಾ ಪ್ರೌಢಶಾಲೆಯಲ್ಲಿ ಆಚರಿಸಲಾಯಿತು.

ಮುಂಜಾನೆ 7-30ಕ್ಕೆ ಶಾಲೆಯ ಮುಖ್ಯೋಪಾದ್ಯಾಯರು ಸ್ಕೌಟ್ಸ್-ಗೈಡ್ಸ್‌ಗಳ ಸಮಕ್ಷಮದಲ್ಲಿ ಧ್ವಜಾರೋಹಣವನ್ನು ನೆರವೇರಿಸಿ ಮಾತನಾಡುತ್ತಾ ಇಂದಿನ ಜಗತ್ತಿನಲ್ಲಿ ಸ್ಕೌಟ್-ಗೈಡ್‌ಗಳು ಸ್ವಾವಲಂಬಿಗಳಾಗಬೇಕು. ಹಾಗೂ ರಾಷ್ಟ್ರನಾಯಕರುಗಳ ಜೀವನ ಶೈಲಿಯನ್ನು ತಿಳಿಸಿದರು, ನಂತರ ಸ್ಕೌಟ್ಸ್-ಗೈಡ್ಸ್‌ಗಳು ಶಾಲೆಯಿಂದ ಜಿಲ್ಲಾ ಕ್ರೀಡಾಂಗಣದ ಪರೇಡ್‌ನಲ್ಲಿ ಭಾಗವಹಿಸಿದರು.

## ಹಾಸನ

ದಿನಾಂಕ 01-07-2013 ರಿಂದ 07-07-2013 ರ ವರೆಗೆ ಜಿಲ್ಲಾ ಸಂಸ್ಥೆ ಆಶ್ರಯದಲ್ಲಿ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಸಮುದಾಯ ಭವನ ಹಾಸನ, ಇಲ್ಲಿ ಸ್ಕೌಟ್ ಮಾಸ್ಟರ್‌ಗಳ ಮೂಲ ತರಬೇತಿ ಶಿಬಿರ ನಡೆಯಿತು. ಹಾಸನ ಜಿಲ್ಲೆಯ ವಿವಿಧ ತಾಲ್ಲೂಕುಗಳಿಂದ ಒಟ್ಟು 13 ಶಿಬಿರಾರ್ಥಿಗಳು ಪಾಲ್ಗೊಂಡಿದ್ದರು. ದಿನಾಂಕ 01-07-2013 ರ ಸಂಜೆ 4 ಗಂಟೆಗೆ ಜಿಲ್ಲಾ ಸ್ಕೌಟ್ ಆಯುಕ್ತರಾದ ಶ್ರೀ ಪ್ರಕಾಶ್ ಎಸ್. ಯಾಜಿ ಅವರು ಶಿಬಿರವನ್ನು ಉದ್ಘಾಟಿಸಿದರು. ಶ್ರೀ ಶಿವಶಂಕರ್ ಎ.ಎಲ್.ಟಿ. (ಸ್ಕೌ) ಶಿಬಿರದ ನಾಯಕರಾಗಿ ಕರ್ತವ್ಯ ನಿರ್ವಹಿಸಿದರು.

ಶ್ರೀ ಎಂ.ಎಸ್. ಪ್ರಕಾಶ್ ಡಿ.ಟಿ.ಸಿ. (ಸ್ಕೌ) ಶ್ರೀಮತಿ ಹೆಚ್.ಜಿ. ಕಾಂಚನಮಾಲ ಡಿ.ಟಿ.ಸಿ. (ಗೈ) ಶ್ರೀಮತಿ ಕಾತ್ಯಾಯಿನಿ, ಶ್ರೀಮತಿ ಲೀಲಾ ಮಹೇಶ್ವರ್, ಇವರು ಸಹಾಯಕರಾಗಿ ಸೇವೆ ಸಲ್ಲಿಸಿದರು. ದಿನಾಂಕ 07-07-2013 ರಂದು ಬೆಳಗ್ಗೆ 7-30ಕ್ಕೆ ಸರ್ವಧರ್ಮ ಸಮನ್ವಯ ಪ್ರಾರ್ಥನೆ ನಡೆಯಿತು. ಸ್ಕೌಟ್ ಆಯುಕ್ತರಾದ ಶ್ರೀ ಪ್ರಕಾಶ್ ಎಸ್. ಯಾಜಿಯವರು ಹಾಗೂ ಜಿಲ್ಲಾ ಸಂಸ್ಥೆಯ ಪದಾಧಿಕಾರಿಗಳು ಉಪಸ್ಥಿತರಿದ್ದರು. ಜಿಲ್ಲಾ ಮುಖ್ಯ ಆಯುಕ್ತರಾದ ಡಾ॥ ಶ್ರೀ ವೈ.ಎಸ್. ವೀರಭದ್ರಪ್ಪನವರು. ಸಮಾರೋಪ ಸಮಾರಂಭದ ಅಧ್ಯಕ್ಷತೆ ವಹಿಸಿದ್ದರು. ಜಿಲ್ಲಾ ಸ್ಕೌಟ್ ಆಯುಕ್ತರಾದ ಶ್ರೀ ಪ್ರಕಾಶ್ ಎಸ್, ಯಾಜಿ ಅವರು ಶಿಬಿರಾರ್ಥಿಗಳನ್ನು ಉದ್ದೇಶಿಸಿ ಮಾತನಾಡಿದರು.

***************

ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಸ್ಥಳೀಯ ಸಂಸ್ಥೆ ಅರಸೀಕೆರೆ ವತಿಯಿಂದ ಸುಕ್ಷೇತ್ರ ಯಾದಾಪುರದಲ್ಲಿ "ಪೆಟ್ರೋಲ್ ಲೀಡರ್‌ಗಳ ಕ್ಯಾಂಪ್" ನ್ನು ದಿನಾಂಕ 25-07-2013 ರಿಂದ 27-07-2013 ರ ವರೆಗೆ ವ್ಯವಸ್ಥೆಗೊಳಿಸಲಾಗಿತ್ತು.

ಕಾರ್ಯಕ್ರಮವನ್ನು ಎ.ಡಿ.ಸಿ. ಶ್ರೀ ವಿಷ್ಣುಮೂರ್ತಿಭಟ್ ಉದ್ಘಾಟಿಸಿದರು. ಕಾರ್ಯಕ್ರಮದ ಅಧ್ಯಕ್ಷತೆಯನ್ನು ಯಾದಾಪುರ ದೇವಾಲಯದ ಕಾರ್ಯದರ್ಶಿ ಶ್ರೀ ವೀರಭದ್ರಪ್ಪ ವಹಿಸಿಕೊಂಡಿದ್ದರು. ಎ.ಡಿ.ಸಿ. ಶ್ರೀ ಬಿ.ಕೆ. ಯೋಗೀಶಾಚಾರ್ ಸ್ಥಳೀಯ ಸಂಸ್ಥೆಯ ಕಾರ್ಯದರ್ಶಿ ಶ್ರೀ ಜೆ.ಎಲ್ ಲೀಲಾ ಮಹೇಶ್ವರ್ ಕಾರ್ಯಕ್ರಮದಲ್ಲಿ ಉಪಸ್ಥಿತರಿದ್ದರು.

ಶ್ರೀಮತಿ ಕಾಮೇಶ್ವರಿ ಭಟ್ ರವರ ನಾಯಕತ್ವದಲ್ಲಿ ನಡೆದ ಈ "ಪೆಟ್ರೋಲ್ ಲೀಡರ್ಸ್ ಕ್ಯಾಂಪ್" ನಲ್ಲಿ ತಾಲ್ಲೂಕಿನ ವಿವಿಧ ಶಾಲೆಗಳಿಂದ 55 ಸ್ಕೌಟ್ಸ್ ಹಾಗೂ 44 ಗೈಡ್ಸ್ ಭಾಗವಹಿಸಿದ್ದರು.

ಹೊರಸಂಚಾರ ಕಾರ್ಯಕ್ರಮವನ್ನು ಏರ್ಪಡಿಸಲಾಗಿತ್ತು. ದೇವಾಲಯದ ಆವರಣವನ್ನು ಸ್ವಚ್ಛ ಮಾಡಲಾಯ್ತು.

ಕಾರ್ಯಕ್ರಮದ ಕೊನೆಯ ದಿನ ಸರ್ವಧರ್ಮ ಪ್ರಾರ್ಥನೆ ಮಾಡಲಾಯ್ತು. ಈ ತರಬೇತಿ ಶಿಬಿರದ ಸಮಾರೋಪ ಕಾರ್ಯಕ್ರಮದಲ್ಲಿ ತಾಲ್ಲೂಕಿನ ಕ್ಷೇತ್ರ ಶಿಕ್ಷಣಾಧಿಕಾರಿಗಳು ಹಾಗೂ ಸ್ಥಳೀಯ ಸಂಸ್ಥೆಯ ಅಧ್ಯಕ್ಷರಾದ ಶ್ರೀ ಎಸ್.ಪಿ. ನಟರಾಜ್, ಕಾರ್ಯದರ್ಶಿ ಶ್ರೀ ಜೆ.ಎಲ್. ಲೀಲಾಮಹೇಶ್ವರ್, ಎ.ಡಿ.ಸಿ.,(ಎಸ್.) ಶ್ರೀ ಜಿ.ಕೆ. ಗಂಗಾಧರ್, ನಾಯಕಿ ಕಾಮೇಶ್ವರಿ ಭಟ್ ರವರು ಉಪಸ್ಥಿತರಿದ್ದರು.

## ಗದಗ

ದಿನಾಂಕ 07-07-2013 ರಂದು ಶ್ರೀ ಆರ್. ಕುಲಕರ್ಣಿ ಪ್ರ.ಹಿ.ಪ್ರಾ.ಶಾ.ಮುಷ್ಟಿಕೊಪ್ಪ, ಮುಂಡರಗಿಯಲ್ಲಿ ವನಮಹೋತ್ಸವ ಆಚರಣೆ ಮಾಡಲಾಯಿತು. ಇದರ ಅಂಗವಾಗಿ ಶಾಲಾ ಆವರಣದಲ್ಲಿ ಸಸಿಗಳನ್ನು ನೆಡುವ ಕಾರ್ಯಕ್ರಮ ನಡೆಯಿತು. ಶಾಲಾ ಮುಖ್ಯೋಪಾಧ್ಯಾಯರಾದ ಶ್ರೀ ಎನ್.ಎಸ್. ಕೀರನ ಹಕ್ಕಿ ಶಾಲೆಯ ಎಸ್.ಡಿ.ಎಂ.ಸಿ. ಅಧ್ಯಕ್ಷರು, ಸದಸ್ಯರು, ಶಿಕ್ಷಕಿಯರು ಸ್ಕೌಟ್ಸ್ ಮಾಸ್ಟರ್ ಶ್ರೀ ರಮೇಶ್ ಅರಬಾಳ ಭಾಗವಹಿಸಿದ್ದರು.

ದಿನಾಂಕ 15-07-2013 ರಂದು ಶಿರಹಟ್ಟಿ ತಾಲ್ಲೂಕು, ಬಟ್ಟೂರಿನ ಸ.ಹಿ.ಪ್ರಾ.ಶಾಲೆಯಲ್ಲಿ ವನಮಹೋತ್ಸವ ಆಚರಿಸಲಾಯಿತು. ಬಟ್ಟೂರಿನ ಸಿಂಡಿಕೇಟ್ ಬ್ಯಾಂಕ್ ವ್ಯವಸ್ಥಾಪಕ ಶ್ರೀ ಅಶೋಕ ಬಬ್ಬೂರವಾಡ ಕಾರ್ಯಕ್ರಮ ಉದ್ಘಾಟಿಸಿದರು. ಕಾರ್ಯಕ್ರಮದ ಅಧ್ಯಕ್ಷತೆಯನ್ನು ಎಸ್.ಡಿ.ಎಂ.ಸಿ., ಅಧ್ಯಕ್ಷರಾದ ಶ್ರೀ ಫಕೀರಪ್ಪ ಹಂಜನ

ವಹಿಸಿದ್ದರು.

ಶ್ರೀಮತಿ ಜಿ.ಎ. ಹುಲಸೂರ ಇವರ ನೇತೃತ್ವದಲ್ಲಿ ಸ್ಕೌಟ್ಸ್ – ಗೈಡ್ಸ್ ಮಕ್ಕಳು ಗಿಡಗಳನ್ನು ನೆಟ್ಟು ಅವುಗಳನ್ನು ನೀರುಹಾಕಿ ಪೋಷಿಸುವ ಪ್ರತಿಜ್ಞೆಗೈದರು. ಮುಖ್ಯ ಶಿಕ್ಷಕ ಶ್ರೀ ಎ.ಎ. ಕುಲಕರ್ಣಿ, ಎಸ್.ಡಿ.ಎಂ.ಸಿ., ಸದಸ್ಯ ಬಸವರಾಜ ಸಿಂದೀಮನಿ ಶಿಕ್ಷಕರು ಉಪಸ್ಥಿತರಿದ್ದರು.

**************

ದಿನಾಂಕ : 06–07–2013 ರಂದು ಜಿ.ಎಲ್.ಪಿ. ಶಾಲೆ ಸಂತದಾಳ ಇಲ್ಲಿ ಗೈಡ್ ಮಕ್ಕಳಿಗೆ ಚಾರಣ ಶಿಬಿರವನ್ನು ಏರ್ಪಡಿಸಿದ್ದರು. ಶಾಲಾ ಮುಖ್ಯೋಪಾಧ್ಯಾಯರು ಚಾರಣದ ಬಗ್ಗೆ ಹಿತನುಡಿ ಹೇಳಿ. ಶುಭಾಶಯಗಳನ್ನು ಕೋರಿದರು.

*************

ದಿನಾಂಕ : 11–07–2013 ರಂದು ಸಿ.ಎಸ್.ಪಾಟೀಲ ಹಿ.ಪ್ರಾ. ಶಾಲೆ ಗದಗದ ಸ್ಕೌಟ್–ಗೈಡ್‌ಗಳು ಗದಗ ಶಹರದ ಬಿ.ಆರ್.ಸಿ.ಕೇಂದ್ರ. ಗದಗ ಗ್ರಾಮೀಣದ ಬಿ.ಆರ್.ಸಿ. ಕೇಂದ್ರ ಜಿಲ್ಲಾ ಕಾರ್ಯಾಲಯದ ಆವರಣವನ್ನು ಸ್ವಚ್ಛಗೊಳಿಸುವುದರ ಮೂಲಕ ಶ್ರಮದಾನ ಸಲ್ಲಿಸಿದರು. ಶಾಲಾ ಸ್ಕೌಟ್ ಶಿಕ್ಷಕರಾದ ಶ್ರೀಯುತ ಎಸ್.ಎಸ್. ಗುಜಮಾಗಡಿ ಜಿಲ್ಲಾ ಕಾರ್ಯದರ್ಶಿಗಳು. ಗದಗ ಇವರು ಸ್ಕೌಟ್–ಗೈಡ್‌ಗಳಿಗೆ ಶ್ರಮದಾನದ ಬಗ್ಗೆ ಅರಿವು ಮೂಡಿಸಿದರು. ಗದಗ ಶಹರದ ಬಿ.ಇ.ಓ. ಆದ ಶ್ರೀ ಐ.ಬಿ. ಬೆನಕಪ್ಪ, ತಾಲೂಕಾ ದೈಹಿಕ ಶಿಕ್ಷಣಾಧಿಕಾರಿಗಳು, ಶ್ರೀ ಎ.ಎಂ. ಕುಂಡೋಜ, ಶ್ರೀ ಎಂ.ಆರ್. ಕಾಳ, ಬಿ.ಆರ್.ಸಿ., ಗ್ರಾಮೀಣದ ಸಮನ್ವಯ ಅಧಿಕಾರಿಗಳಾದ ಶ್ರಿ ಬ್ಹಿ.ಫ್ಹಿ. ಸತುವಿ ಪ್ರಮನಿ, ಶ್ರೀ ಎಂ.ಆರ್. ನದಾಫ್ ಹಾಗೂ ಜಿಲ್ಲಾ ಸಂಘಟಕರಾದ ಶ್ರೀ ಕೆ.ಟಿ. ಮಲ್ಲೇಶ್ವರಪ್ಪ ಭಾಗವಹಿಸಿದ್ದರು.

## ಬೆಳಗಾವಿ

ದಿನಾಂಕ : 21–06–2013 ರಂದು ರಾಯಬಾಗ ವಲಯ (ಸ್ಥಳೀಯ) ಸಂಸ್ಥೆಯ ಸ್ಕೌಟರ್ಸ್–ಗೈಡರ್ಸ್ ಶಿಕ್ಷಕರ ಸಮಾವೇಶವು ಜರುಗಿತು. ಸಮಾವೇಶದ ಅಧ್ಯಕ್ಷತೆಯನ್ನು ಶ್ರೀ ಎಂ.ಬಿ. ಬಜಂತ್ರಿ ಬಿ.ಇ.ಓ. ಹಾಗೂ ಎ.ಡಿ.ಸಿ (ಸ್ಕೌಟ್) ರಾಯಬಾಗರವರು ವಹಿಸಿದ್ದರು. ಶ್ರೀ ಡಿ.ಎಸ್. ದಿಗ್ರಜ ದೈಹಿಕ ಶಿಕ್ಷಣ ಅಧಿಕಾರಿ ಹಾಗೂ ಎ.ಡಿ.ಸಿ. (ಸ್ಕೌಟ್) ಉಪಸ್ಥಿತರಿದ್ದರು. ಜಿಲ್ಲೆಯಿಂದ ಎ.ಎಸ್.ಓ.ಸಿ.(ಸ್ಕೌಟ್) ಆದ ಶ್ರೀ ನಾಗೇಶ ಆರ್. ಶಿವಪುರ ರವರು ಕಾರ್ಯಕ್ರಮವನ್ನು ನಡೆಸಿಕೊಟ್ಟರು. ಶ್ರೀ ಕೆ.ಡಿ. ತೋಳಿ ಕಾರ್ಯದರ್ಶಿ ಶ್ರೀ ಮಠಪತಿ ಖಜಾಂಚಿ, ಶ್ರೀ ಆನೇಸೂರು ಸ್ಥಳೀಯ ಸಂಸ್ಥೆ ಪದಾಧಿಕಾರಿಗಳೊಂದಿಗೆ 50 ಸ್ಕೌಟರ್–ಗೈಡರ್ ಶಿಕ್ಷಕರು ಭಾಗವಹಿಸಿದ್ದರು.

***********

ದಿನಾಂಕ 22–06–2013 ರಂದು ಸ.ಹಿ.ಪ್ರಾ. ಶಾಲೆ, ಕೊಟಬಾಗ, ಹುಕ್ಕೇರಿ ಇಲ್ಲಿ ಹುಕ್ಕೇರಿ ವಲಯದ ಸ್ಕೌಟರ್ಸ್–ಗೈಡರ್ಸ್ ಶಿಕ್ಷಕರ ಸಮಾವೇಶವನ್ನು ಏರ್ಪಡಿಸಲಾಗಿತ್ತು. ಶ್ರೀ ಜಿ.ಬಿ. ಮಣ್ಣಿಕೇರಿ ಬಿ.ಇ.ಓ., ಹುಕ್ಕೇರಿ

ಹಾಗೂ ಬೆಳಗಾವಿ ಜಿಲ್ಲಾ ಸ್ಕೌಟ್ ಆಯುಕ್ತರು ಇವರುಗಳ ಅಧ್ಯಕ್ಷತೆಯಲ್ಲಿ ಜರುಗಿದ ಸಮಾವೇಶದಲ್ಲಿ ಒಟ್ಟು 49 ಶಿಕ್ಷಕರು ಭಾಗವಹಿಸಿದ್ದರು. ಈ ಸಂದರ್ಭದಲ್ಲಿ ಶ್ರೀ ಬಡಿಗೇರ ದೈ. ಶಿ. ಅಧಿಕಾರಿಗಳು ಹುಕ್ಕೇರಿರವರು ಹಾಗೂ ಸ್ಥಳೀಯ ಸಂಸ್ಥೆಯ ಪದಾಧಿಕಾರಿಗಳಾದ ಶ್ರೀ ಕೋಚರಿಕರ್, ಶ್ರೀ ಗುಡಸೆ, ಶ್ರೀ ಸನದಿ, ಶ್ರೀ ಮಣ್ಣಿಕೇರಿ, ಶ್ರೀ ಕುಪ್ಪಾನಟ್ಟಿ, ಶ್ರೀಮತಿ ಅಣಿಗೇರಿ ಉಪಸ್ಥಿತರಿದ್ದರು.

*************

ದಿನಾಂಕ 29-06-2013 ರಂದು ರಾಮದುರ್ಗ ಸ್ಥಳೀಯ ಸಂಸ್ಥೆಯ ಸ್ಕೌಟರ್ಸ್-ಗೈಡರ್ಸ್ ಶಿಕ್ಷಕರ ಸಮಾವೇಶವು ಸಿ.ಎಸ್. ಬೆಂಬಳಗಿ ಕಾಲೇಜು, ರಾಮದುರ್ಗ ಇಲ್ಲಿ ನಡೆಯಿತು.

ಅಧ್ಯಕ್ಷತೆಯನ್ನು ಶ್ರೀ ವಿ.ಎನ್. ಗೋಡಕಿಂಡಿ. ಉಪಾಧ್ಯಕ್ಷರು ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಸ್ಥಳೀಯ ಸಂಸ್ಥೆ, ರಾಮದುರ್ಗ ಇವರು ವಹಿಸಿದ್ದರು. ಶ್ರೀ ಆರ್. ಎಸ್. ವಾಸನದ. ದೈ.ಶಿ. ಅಧಿಕಾರಿಗಳು ಹಾಗೂ ಎ.ಡಿ.ಸಿ., (ಸ್ಕೌಟ್) ರವರು, ಶ್ರೀ ಕೆ.ವಿ. ಪಾಟೀಲ, ಪ್ರಾಚಾರ್ಯರು, ಸಿ.ಎಸ್. ಬೆಂಬಳಗಿ. ಕಾಲೇಜು. ಈ ಸಂದರ್ಭದಲ್ಲಿ ಉಪಸ್ಥಿತರಿದ್ದರು. ಕಾರ್ಯದರ್ಶಿ ಸ್ಥಳೀಯ ಸಂಸ್ಥೆ ರಾಮದುರ್ಗ ಎಲ್ಲರನ್ನೂ ಸ್ವಾಗತಿಸಿದರು. ಶ್ರೀ ಭಜಂತ್ರಿ ಸ್ಕೌಟ್ ಶಿಕ್ಷಕರು ವಂದನಾರ್ಪಣೆ ಮಾಡಿದರು. ಒಟ್ಟು 30 ಸ್ಕೌಟರ್ಸ್-ಗೈಡರ್ಸ್ ಭಾಗವಹಿಸಿದ್ದರು.

************

ದಿನಾಂಕ 01-07-2013 ರಂದು ಕ್ಷೇತ್ರ ಶಿಕ್ಷಣಾಧಿಕಾರಿಗಳ ಸಭಾಭವನ, ಸವದತ್ತಿ ಇಲ್ಲಿ ಸವದತ್ತಿ ವಲಯ ಮಟ್ಟದ ಸ್ಕೌಟರ್ಸ್-ಗೈಡರ್ಸ್ ಶಿಕ್ಷಕರ ಸಮಾವೇಶವನ್ನು ಸಂಘಟಿಸಿದ್ದರು. ಸಮಾರಂಭದ ಅಧ್ಯಕ್ಷತೆಯನ್ನು ಶ್ರೀ ಎಸ್.ಸಿ. ಕರಿಕಟ್ಟೆ ಬಿ.ಇ.ಓ., ಹಾಗೂ ಎ.ಡಿ.ಸಿ. (ಸ್ಕೌಟ್)ರವರು ವಹಿಸಿದ್ದರು. ಈ ಸಂದರ್ಭದಲ್ಲಿ ಶ್ರೀ ಬಿ.ಬಿ. ಮಧುರಾಪುರ, ಪ್ರೌಢಶಾಲೆಯ ಪ್ರಭಾರಿ ಮುಖ್ಯೋಪಾಧ್ಯಾಯನಿ, ಶ್ರೀಮತಿ ಗೋಕಾಕ ರವರು ಹಾಗೂ ದೈಹಿಕ ಶಿಕ್ಷಣದ ಅಧಿಕಾರಿಗಳಾದ ಶ್ರೀ ಬೆಟಗೇರಿ ರವರು ಉಪಸ್ಥಿತರಿದ್ದರು. ಒಟ್ಟು 105 ಶಿಕ್ಷಕರು ಸಮಾವೇಶದಲ್ಲಿ ಭಾಗವಹಿಸಿದ್ದರು.

***********

ದಿನಾಂಕ : 12-07-2013 ರಂದು ಸ. ಉರ್ದು ಹಿ. ಪ್ರಾ. ಶಾಲೆ ಅಥಣಿ ಇಲ್ಲಿ ಅಥಣಿ ವಲಯದ ಸ್ಕೌಟರ್ಸ್-ಗೈಡರ್ಸ್ ಶಿಕ್ಷಕರ ಸಮಾವೇಶವನ್ನು ಕ್ಷೇತ್ರಶಿಕ್ಷಣಾಧಿಕಾರಿಗಳು ಹಾಗು ಎ.ಡಿ.ಸಿ. ಸ್ಕೌಟ್ ಆದ ಶ್ರೀ ಆರ್.ಪಿ. ಜುಟ್ಟನವರ ರವರು ಅಧ್ಯಕ್ಷತೆಯಲ್ಲಿ ನಡೆಸಲಾಯಿತು. ಶ್ರೀ ಆರ್.ಎ. ನಿಂಬಾಳಕರ ಡಿ.ಟಿ.ಸಿ., ಬೆಳಗಾವಿ ಶ್ರೀ ನಾಗೇಶ ಆರ್. ಶಿವಾಪುರ ಎ.ಎಸ್.ಓ.ಸಿ. (ಎಸ್.) ಬೆಳಗಾವಿ ಹಾಗೂ ಶ್ರೀ ಬಡಿಗೇರ ದೈ. ಶಿ. ಅಧಿಕಾರಿ ಅಥಣಿ ಇವರುಗಳು ಉಪಸ್ಥಿತರಿದ್ದು ಕಾರ್ಯಕ್ರಮವನ್ನು ನಡೆಸಿಕೊಟ್ಟರು. ಒಟ್ಟು 36 ಶಿಕ್ಷಕರು ಭಾಗವಹಿಸಿದ್ದರು.

************

ದಿನಾಂಕ : 15-08-2013 ರಂದು 67ನೇ ಸ್ವಾತಂತ್ರ್ಯ ದಿನಾಚರಣೆಯ ಅಂಗವಾಗಿ ಸ್ಕೌಟ್ ಭವನದಲ್ಲಿ ಧ್ವಜಾರೋಹಣ ಕಾರ್ಯಕ್ರಮವನ್ನು ಆಚರಿಸಲಾಯಿತು. ಧ್ವಜಾರೋಹಣವನ್ನು ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀಯುತ ಎಸ್.ವೈ. ಹುಡೇದ ರವರು ನೆರವೇರಿಸಿದರು. ಜಿಲ್ಲಾ ಕೇಂದ್ರ ಸ್ಥಾನಿಕ ಆಯುಕ್ತರಾದ ಶ್ರೀ ಟಿ.ಡಿ. ಕಾಂಬೋಜಿ, ಜಿಲ್ಲಾ ಸಹಕಾರ್ಯದರ್ಶಿ ಶ್ರೀ ಎಸ್.ಎಂ. ನದಾಫ, ಜಿಲ್ಲಾ ಸಂಘಟಕ ಡಿ.ಬಿ. ಅತ್ತಾರ, ಕಬ್ಸ್ ಮತ್ತು ಬುಲ್‌ಬುಲ್ಸ್ ಹಾಗೂ ಸ್ಕೌಟ್-ಗೈಡ್‌ಗಳು ಉಪಸ್ಥಿತರಿದ್ದರು.

ಸ್ವಾತಂತ್ರ್ಯ ದಿನಾಚರಣೆಯ ಅಂಗವಾಗಿ ಜಿಲ್ಲಾ ಆಡಳಿತದವರು ಆಯೋಜಿಸಿದ್ದ. ಸಾಮೂಹಿಕ ಪಥ ಸಂಚಲನದಲ್ಲಿ ಸ್ಥಳೀಯ ಶ್ರೀ ಟಿ.ಕೆ. ಮಾಡೆಲ್ ಪ್ರೌಢಶಾಲೆ ಹಾಗೂ ಸಿದ್ಧರಾಮೇಶ್ವರ ಪ್ರೌಢಶಾಲೆಯ ಸ್ಕೌಟ್ ತಂಡಗಳು ಮತ್ತು ಸೆಂಟ್ ಜೋಸೆಪ್ಸ್ ಪ್ರೌಢಶಾಲೆ ಹಾಗೂ ಮಹಿಳಾ ವಿದ್ಯಾಲಯ ಪ್ರೌಢಶಾಲೆಯ ಗೈಡ್ಸ್ ತಂಡಗಳು ಭಾಗವಹಿಸಿದ್ದವು. ಇವುಗಳಲ್ಲಿ ಶ್ರೀ ಸಿದ್ದರಾಮೇಶ್ವರ ಪ್ರೌಢಶಾಲೆಯ ಸ್ಕೌಟ್ ತಂಡ ಪ್ರಥಮ ಸ್ಥಾನ ಪಡೆದಿದೆ.

## ಬಿಜಾಪುರ

ಉತ್ತರಾಖಂಡ ಪ್ರವಾಹ ಸಂತ್ರಸ್ಥರಿಗೆ ಮುದ್ದೇಬಿಹಾಳದ ಕನಕದಾಸ ಶಾಲೆಯ ಸಂಗೊಳ್ಳಿ ರಾಯಣ್ಣ ಸ್ಕೌಟ್ಸ್ ಮತ್ತು ಗೈಡ್ಸ್‌ಗಳು ಹಾಗೂ ಸಂಕಲ್ಪ ಸಮಾಜ ಸೇವಾ ಯುವ ವೇದಿಕೆ ಸಹಯೋಗದೊಂದಿಗೆ ಪರಿಹಾರ ನಿಧಿ ಸಂಗ್ರಹಿಸಲಾಯಿತು. 20 ಸಾವಿರ ರೂ. ಚೆಕ್‌ನ್ನು ವಿಜಾಪುರ ಜಿಲ್ಲಾಧಿಕಾರಿ ಶಿವಯೋಗಿ ಕಳಸದ ಅವರ ಮೂಲಕ ಪ್ರಧಾನ ಮಂತ್ರಿ ಪರಿಹಾರ ನಿಧಿಗೆ ನೀಡಲಾಯಿತು. ಸಹಜಾನಂದ ದಾದರಗಿ, ಶರಣು ಶಬರದ, ಜಗದೀಶ ಬೋಳಸೂರ, ಸುನೀಲ ಬಿರಾದಾರ ಪಾಟೀಲ, ಎಸ್.ಎನ್. ಶಿಂಧೆ ಇತರರು ಉಪಸ್ಥಿತರಿದ್ದರು.

**********

ದಿನಾಂಕ 15-08-2013 ರಂದು ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಜಿಲ್ಲಾ ಸಂಸ್ಥೆ ವಿಜಾಪುರದ ಜಿಲ್ಲಾ ಕಾರ್ಯಾಲಯದಲ್ಲಿ ಜಿಲ್ಲಾ ಉಪಾಧ್ಯಕ್ಷರು ಹಾಗೂ ಸಂಯುಕ್ತ ಕರ್ನಾಟಕ ಪತ್ರಿಕೆ ಜಿಲ್ಲಾ ವರದಿಗರರಾದ ಶ್ರೀ ವಾಸುದೇವ ಹೆರಕಲ್ ಅವರು ಧ್ವಜಾರೋಹಣ ಮಾಡಿದರು. ಸ್ಕೌಟ್ಸ್-ಗೈಡ್ಸ್‌ಗಳನ್ನು ಉದ್ದೇಶಿಸಿ ಮಾತನಾಡಿ ನಾವು ದೇಶಕ್ಕಾಗಿ ಹೋರಾಡಿ, ತ್ಯಾಗ ಬಲಿದಾನ ನೀಡಿದ ಮಹಾನ್ ನಾಯಕರ ತ್ಯಾಗ ಮತ್ತು ಆದರ್ಶಗಳನ್ನು ನಮ್ಮ ಜೀವದಲ್ಲಿ ಅಳವಡಿಸಿಕೊಳ್ಳಬೇಕೆಂದು ಹೇಳಿದರು.

ಜಿಲ್ಲಾ ಗೈಡ್ಸ್ ಆಯುಕ್ತರಾದ ಶ್ರೀಮತಿ ಭಾಗ್ಯಶ್ರೀ ಸಿಂಧಗೀಕರ ಅವರು ಮಾತನಾಡಿ ಸ್ಕೌಟ್ಸ್ ಮತ್ತು ಗೈಡ್ಸ್‌ಗೆ ಸೇರಿದ ಎಲ್ಲರೂ ತಮ್ಮ ಜೀವನ, ಮುಡುಪಾಗಿ ಇಡಬೇಕು. ಈ ಕೆಲಸ ಬಾಲ್ಯದಿಂದಲೇ ಸಾಗಬೇಕು, ಇದಕ್ಕೆ ಎಲ್ಲರ ಪ್ರೋತ್ಸಾಹ ಬಹಳ ಅವಶ್ಯಕತೆ ಇದೆ ಎಂದರು. ಈ ಕಾರ್ಯಕ್ರಮದಲ್ಲಿ ಜಿಲ್ಲಾ ಸಹ ಕಾರ್ಯದರ್ಶಿ ಶರಣು ಸಬರದ, ಗೌರಿ ಲೋಕ ಪತ್ರಿಕೆ ಸಂಪಾದಕರಾದ ಶಿವಾನಂದ ಭುಯ್ಯಾರ, ಸುನೀಲ ಜತ್ತಿ, ಜಿಲ್ಲಾ ಸಂಘಟನಾ ಆಯುಕ್ತರಾದ ಜಗದೀಶ ಬೋಳಸೂರ, ಸುನೀಲ ಬಿರಾದಾರ ಪಾಟೀಲ, ಸಚೀನ್ ಜೇವೂರ ಮತ್ತು ಸೆಂಟ್ ಜೋಸೆಪ್ ಶಾಲೆಯ ಸ್ಕೌಟ್ಸ್ ಮತ್ತು ಗೈಡ್ಸ್ ಭಾಗವಹಿಸಿದ್ದರು.

*************

ದಿನಾಂಕ 27-07-2013 ಹಾಗೂ 28-07-2013 ರಂದು ಕಂದಗಲ್ ಹನುಮಂತರಾಯ ರಂಗ ಮಂದಿರದಲ್ಲಿ ಸಂಯುಕ್ತ ಕರ್ನಾಟಕ ಪತ್ರಿಕೆ 80 ವರ್ಷ ಪೂರೈಸಿದ ಪ್ರಯುಕ್ತ ಸಹಸ್ರ ಚಂದ್ರದರ್ಶನ ಕಾರ್ಯಕ್ರಮ ನಡೆಯಿತು. ಈ ಸಂಭ್ರಮದಲ್ಲಿ ರಕ್ತದಾನ, ಕಣ್ಣುದಾನ, ದೇಹದಾನ, ಕಾರ್ಯಕ್ರಮ ಮತ್ತು ರಂಗೋಲಿ ಹಾಗೂ ಚರ್ಚಾ ಸ್ಪರ್ಧೆ ಏರ್ಪಡಿಸಲಾಗಿತ್ತು. ಈ ಎಲ್ಲಾ ಕಾರ್ಯಕ್ರಮಗಳು ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಜಿಲ್ಲಾ ಸಂಸ್ಥೆ ಬಿಜಾಪೂರ ಹಾಗೂ ಲೋಕ ಶಿಕ್ಷಣ ಟ್ರಸ್ಟ್ ಬೆಂಗಳೂರು ಇವರ ಸಂಯುಕ್ತಾಶ್ರಯದಲ್ಲಿ ನಡೆಯಿತು.

ಹೆಚ್.ಪಿ.ಎಸ್. ತಿಗಣಿಬಿದರಿ ಶಾಲೆ ಸ್ಕೌಟ್ಸ್‌ಗಳ ಯೋಗಾಸನದ ವಿವಿಧ ಭಂಗಿಗಳು ನೋಡುಗರ ಮನ ತಣಿಸಿದವು. ಜಿಲ್ಲಾ ಉಸ್ತುವಾರಿ ಮಂತ್ರಿಗಳು ಹಾಗೂ ಜಲ ಸಂಪನ್ಮೂಲ ಸಚಿವರಾದ ಮಾನ್ಯ ಶ್ರೀ ಎಮ್.ಬಿ. ಪಾಟೀಲ ಅವರು ಅಧ್ಯಕ್ಷತೆ ವಹಿಸಿದ್ದರು. ಪರಮಪೂಜ್ಯ ಶ್ರೀ ಶ್ರೀ ಸಿದ್ಧೇಶ್ವರ ಸ್ವಾಮಿಗಳು ಆಶೀರ್ವದಿಸಿದರು.

ವಿವಿಧ ತಾಲೂಕುಗಳಿಂದ ಸ್ಕೌಟ್ಸ್ ಮಾಸ್ಟರ್ ಗೈಡ್ ಕ್ಯಾಪ್ಟನ್‌ಗಳು ಹಾಗೂ ಎಮ್.ಜಿ.ವ್ಹಿ.ಸಿ. ಕಾಲೇಜು ಮುದ್ದುಬಿಹಾಳ ರೋವರ್ ಸ್ಕೌಟ್‌ಗಳು ಕೂಡಾ ಭಾಗವಹಿಸಿದ್ದರು. ಜಿಲ್ಲಾ ಸ್ಕೌಟ್ಸ್ ಆಯುಕ್ತರು ಹಾಗು ಉಪನಿರ್ದೇಶಕರಾದ ಎಸ್. ವಾಯ್ ಹಳಿಂಗಳಿ, ಗೈಡ್ಸ್ ಆಯುಕ್ತರಾದ ಶ್ರೀಮತಿ ಭಾಗ್ಯಶ್ರೀ ಸಿಂಧಗೀಕರ, ಜಿಲ್ಲಾ ಉಪಾಧ್ಯಕ್ಷರು ಹಾಗೂ ಸಂಯುಕ್ತ ಜಿಲ್ಲಾ ಖಜಾಂಚಿ ಸಹಜಾನಂದ ಧಂದರಗಿ, ಜಿಲ್ಲಾ ಸ್ಥಾನಿಕ ಆಯುಕ್ತರಾದ ಸಿದ್ಧಣ್ಣಾ ಸಕ್ರಿ, ಸಂಕೇತ ಬಗಲಿ, ಸಹ ಕಾರ್ಯದರ್ಶಿ ಶರಣು ಸಬರದ, ಸಲಹೆ ಸೂಚನೆ ನೀಡಿ ಮಾರ್ಗದರ್ಶನ ಮಾಡಿದರು. ಜಿಲ್ಲಾ ಸಂಘಟನಾ ಆಯುಕ್ತರಾದ ಜಗದೀಶ ಬೋಳಸೂರ, ಸುನೀಲ ಬಿರಾದಾರ ಪಾಟೀಲ, ಸರಸ್ವತಿ ಶಿಂಧೆ ಇಡೀ ಕಾರ್ಯಕ್ರಮದ ನೇತೃತ್ವ ವಹಿಸಿಕೊಂಡಿದ್ದರು.

************

ದಿನಾಂಕ 27-07-2013 ರಂದು ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಜಿಲ್ಲಾ ಕಾರ್ಯಾಲಯಕ್ಕೆ ವಿಧಾನ ಪರಿಷತ್ ಸದಸ್ಯರಾದ ಶ್ರೀ ಅರುಣ ಶಹಾಪೂರ ಅವರು ಭೇಟಿ ನೀಡಿದ ಸಂದರ್ಭದಲ್ಲಿ ಜಿಲ್ಲಾ ಸಂಸ್ಥೆಯ ಪದಾಧಿಕಾರಿಗಳು ಜಿಲ್ಲಾ ತರಬೇತಿ ಕೇಂದ್ರದ ಅಭಿವೃದ್ಧಿ ಸಲುವಾಗಿ ಅನುದಾನ ನೀಡಲು ಮನವಿ ಮಾಡಿಕೊಂಡರು. ಈ ಮನವಿಯನ್ನು ಪುರಸ್ಕರಿಸಿ ತಮ್ಮ ಅನುದಾನದಲ್ಲಿ ನಾಲ್ಕು ಲಕ್ಷ ರೂ. (4,00,000/-) ನೀಡುವುದಾಗಿ ಭರವಸೆ ನೀಡಿದರು. ಈ ಸಂದರ್ಭದಲ್ಲಿ ಜಿಲ್ಲಾ ಕಾರ್ಯದರ್ಶಿ ಶ್ರೀ ಎಸ್.ಎಸ್. ಬೊಮ್ಮನಹಳ್ಳಿ ಸಹ ಕಾರ್ಯದರ್ಶಿ ಶ್ರೀ ಶರಣು ಸಬರದ, ಜಿಲ್ಲಾ ಸ್ಥಾನಿಕ ಆಯುಕ್ತರಾದ ಶ್ರೀ ಸಿದ್ಧಣ್ಣ ಸಕ್ರಿ, ಶ್ರೀ ಸಂಕೇತ ಬಗಲಿ, ಜಿಲ್ಲಾ ಸಂಘಟನಾ ಆಯುಕ್ತರಾದ ಶ್ರೀ ಜಗದೀಶ ಬೋಳಸೂರ, ಶ್ರೀ ಸುನೀಲ ಬಿರಾದಾರ ಪಾಟೀಲ, ತಾಲೂಕಾ ಕಾರ್ಯದರ್ಶಿ ಶ್ರೀ ಪಿ.ಎಸ್. ಕುಂಬಾರ ಉಪಸ್ಥಿತರಿದ್ದರು.

*************

ದಿನಾಂಕ 27-07-2013 ಹಾಗೂ 28-07-2013 ರಂದು ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಜಿಲ್ಲಾ ಸಂಸ್ಥೆ ಅಡಿಯಲ್ಲಿ ಜಿಲ್ಲಾ ಸ್ಕೌಟ್ಸ್ ಭವನದಲ್ಲಿ ಜಿಲ್ಲಾ ಮಟ್ಟದ ಸ್ಕೌಟರ್ಸ್ ಮತ್ತು ಗೈಡರ್ಸ್ ಸಮಾವೇಶ ಹಮ್ಮಿಕೊಳ್ಳಲಾಗಿತ್ತು. ಸಮಾವೇಶದ ನಾಯಕತ್ವವನ್ನು ಜಿಲ್ಲಾ ತರಬೇತಿ ಆಯುಕ್ತರಾದ ಎಸ್.ಬಿ. ಭಜಂತ್ರಿ ಅವರು ವಹಿಸಿಕೊಂಡಿದ್ದರು.

ಶ್ರೀಮತಿ ಗುಣಾಬಾಯಿ ಬಸನಾಳ, ಶ್ರೀ ಜಗದೀಶ ಬೋಳಸೂರ ಇ.ಎಸ್.ಎಸ್. ಬೊಮ್ಮನಹಳ್ಳಿ ಸಂಪನ್ಮೂಲ ವ್ಯಕ್ತಿಗಳಾಗಿದ್ದರು.

## ಕೊಡಗು

ದಿನಾಂಕ : 15-08-2013 ರಂದು ಸ್ವಾತಂತ್ರ್ಯ ದಿನಾಚರಣೆ ಅಂಗವಾಗಿ ಬೆಳಿಗ್ಗೆ 7.30ಕ್ಕೆ ಸರಿಯಾಗಿ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆಯಲ್ಲಿ ಜಿಲ್ಲಾ ಪ್ರಧಾನ ಆಯುಕ್ತರಾದ ಶ್ರೀ ಕೆ.ಟಿ. ಬೇಬಿ ಮ್ಯಾಥ್ಯೂರವರು ಧ್ವಜಾರೋಹಣ ಮಾಡಿದರು. ಈ ಸಂದರ್ಭ ಹೆಚ್.ಡಬ್ಲ್ಯೂ.ಬಿ. ಹೋಲ್ಡರ್ ರಂಜಿತ್, ರೋವರ್ ಜನಾರ್ಧನ್, ಯೂತ್ ಸರ್ವಿಸ್ ಕಛೇರಿಯ ಶ್ರೀ ರಘು, ಕಾರ್ಯದರ್ಶಿ ಶ್ರೀಮತಿ ದಮಯಂತಿ ಇತರರು ಹಾಜರಿದ್ದರು.

ನಂತರಜಿಲ್ಲಾಡಳಿತದ ವತಿಯಿಂದ ನಡೆದ ಸ್ವಾತಂತ್ರ್ಯ ದಿನಾಚರಣೆ ಪಥ ಸಂಚಲನದಲ್ಲಿ 125 ಸ್ಕೌಟ್ ಮತ್ತು ಗೈಡ್‌ಗಳು ಭಾಗವಹಿಸಿದ್ದರು. ಇದೇ ಸಂದರ್ಭದಲ್ಲಿ ಜಿಲ್ಲಾಡಳಿತದ ವತಿಯಿಂದ ಸ್ಕೌಟ್ಸ್ ಮತ್ತು ಗೈಡ್ಸ್‌ನಲ್ಲಿ ದೀರ್ಘವಾಗಿ ಸೇವೆ ಸಲ್ಲಿಸಿದ ಶ್ರೀ ಬಿ.ಬಿ. ನಾಣಯ್ಯ, ಶ್ರೀಮತಿಯರಾದ ರೇಖಾ ಕುಮಾರಿ, ಮಾರ್ಗರೇಟ್ ಲಸ್ರಾದೋ, ಮಾರ್ಗರೇಟ್ ಕೆ.ಅರ್. ಇವರನ್ನು ಸನ್ಮಾನಿಸಲಾಯಿತು.

## ದಕ್ಷಿಣ ಕನ್ನಡ

ದಿನಾಂಕ 17-07-2013 ರಂದು ಎಸ್.ಡಿ.ಎಂ.ಸಿ. ಬ್ಯುಸಿನೆಸ್ ಮೇನೇಜ್ಮೆಂಟ್ ಕಾಲೇಜ್ ಮಂಗಳೂರು

ದಿನಾಂಕ 17-07-2013 ರಂದು ಸೈಂಟ್ ಆಲೋಸಿಯಸ್ ಪ್ರಥಮ ದರ್ಜೆ ಕಾಲೇಜ್ ಮಂಗಳೂರು

ದಿನಾಂಕ 27-07-2013 ರಂದು ವಿವೇಕನಂದ ಕಾಲೇಜ್ ಪುತ್ತೂರು ಈ ಕಾಲೇಜುಗಳಲ್ಲಿ ರೋವರ್, ರೇಂಜರ್ ಘಟಕಗಳನ್ನು ಉದ್ಘಾಟಿಸಲಾಯಿತು.

ದಿನಾಂಕ 03-08-2013 ರಂದು ಸೆಕ್ರೇಡ್ ಹಾರ್ಟ್ ಪ್ರಥಮ ದರ್ಜೆ ಕಾಲೇಜ್ ಮಾಡಾಂತ್ಯರ್ ಇಲ್ಲಿ ರೋವರ್ ರೇಂಜರ್ ಘಟಕಗಳನ್ನು ಉದ್ಘಾಟಿಸಿಲಾಯಿತು. ವೇದಿಕೆಯಲ್ಲಿ ಸ್ಥಳೀಯ ಸಂಸ್ಥೆಯ ಕಾರ್ಯದರ್ಶಿ ಸ್ಕೌಟರ್ ಸಾಂತಾರಂ ಪ್ರಭುರವರು ಉಪಸ್ಥಿತರಿದ್ದರು, ಪ್ರಾಂಶುಪಾಲರಾದ ಅಲೇಕ್ಸ್ ಸಿಕ್ವೇರಾ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆಯ ಬಗ್ಗೆ ಮೆಚ್ಚುಗೆಯ ಮಾತುಗಳನ್ನು ಆಡಿದರು.

ದಿನಾಂಕ 06-08-2013 ರಂದು ವಿಜಯ ಪ್ರಥಮ ದರ್ಜೆ ಕಾಲೇಜ್ ಮುಲ್ಕಿ ಇಲ್ಲಿ ರೋವರ್ ರೇಂಜರ್ ಘಟಕಗಳನ್ನು ಉದ್ಘಾಟಿಸಿಲಾಯಿತು. ವೇದಿಕೆಯಲ್ಲಿ ಕಾಲೇಜ್ ಪ್ರಾಂಶುಪಾಲರು ಉಪಸ್ಥಿತರಿದ್ದರು ಅಧ್ಯಕ್ಷೀಯ ಭಾಷಣ ಮಾಡಿದರು. ಉಪನ್ಯಾಸಕರಾದ ಸೋಮಶೇಖರ್‌ರವರು ಉಪಸ್ಥಿತರಿದ್ದರು.

ದಿನಾಂಕ 10-08-2013 ರಂದು ಸರಕಾರಿ ಪ್ರಥಮ ದರ್ಜೆ ಕಾಲೇಜ್ ರಥಬೀದಿ ಮಂಗಳೂರು ಇಲ್ಲಿ ರೋವರ್ ರೇಂಜರ್ ಘಟಕಗಳನ್ನು ಉದ್ಘಾಟಿಸಲಾಯಿತು. ವೇದಿಕೆಯಲ್ಲಿ ನ್ಯಾಯವಾದಿ ಸಂತೋಷ್ಸ, ಅತಿಥಿಯಾಗಿದ್ದು ಮಾದಕ ದ್ರವ್ಯದ ಬಗ್ಗೆ ತಿಳಿಸಿದರು. ರೋವರ್ ಲೀಡರ್ ಪುರುಷೋತ್ತಮ ಭಟ್, ಪ್ರಾಸ್ತಾವಿಕವಾಗಿ ಮಾತನಾಡಿದರು. ರಫೀಕ್ ಹಾಗೂ ಸೈಲಿರಾಣಿರವರು ಉಪಸ್ಥಿತರಿದ್ದರು. ಪ್ರಾಂಶುಪಾಲರಾದ ಪ್ರೊ. ರಾಧಾಕೃಷ್ಣ ಕೆ. ಅಧ್ಯಕ್ಷತೆ ವಹಿಸಿದ್ದರು. ರೋವರ್ ಪ್ರಕಾಶ್ ಸ್ವಾಗತಿಸಿದರು. ತಿಲಕರಾಜ್ ದನ್ಯವಾದ ನೀಡಿದರು, ರೇಂಜರ್ ಆರ್ಯ ಕಾರ್ಯಕ್ರಮ ನಿರ್ವಹಿಸಿದರು.

ದಿನಾಂ 14–08–2013 ರಂದು ಆಳ್ವಸ್ ಪ್ರಥಮ ದರ್ಜೆ ಕಾಲೇಜ್ ವಿದ್ಯಾಗಿರಿ ಮುಡಬಿದ್ರೆ ಇಲ್ಲಿ ರೋವರ್ ರೇಂಜರ್ ಘಟಕಗಳನ್ನು ಉದ್ಘಾಟಿಸಲಾಯಿತು. ವೆ.ದಿಕೆಯಲ್ಲಿ ನ್ಯಾಯವಾದಿ ಶ್ರೀ ಸಂತೋಷ್, ಅಥಿತಿಯಾಗಿದ್ದು ಮಾದಕ ದ್ರವ್ಯದ ಬಗ್ಗೆ ತಿಳಿಸಿದರು. ಪ್ರಾಂಶುಪಾಲರಾದ ಕುರಿಯಾನ ಶ್ರೀ ಅಧ್ಯಕ್ಷತೆ ವಹಿಸಿದರು. ರೋವರ್ ಸ್ಕೌಟ್ ಲೀಡರ್ ಬಾಲಕೃಷ್ಣ, ರೇಂಜರ್ ಲೀಡರ್ ಸ್ಪೂರ್ತಿ ಉಪಸ್ಥಿತರಿದ್ದರು. ರೇಂಜರ್ ಮೇಘ ಅತಿಥಿಗಳನ್ನು ಪರಿಚಯಿಸಿದರು. ರೇಂಜರ್ ನಿಚ್ಚಿತಾ ಸ್ವಾಗತಿಸಿದರು. ಶ್ರೀ ರುಮಪೆನ್ ಪ್ರಶಾಂತ್ ಧನ್ಯವಾದ ನೀಡಿದರು. ರೇಂಜರ್ ಅಂಸುಲಾ ಕಾರ್ಯಕ್ರಮ ನಿರ್ವಹಿಸಿದರು.

ಈ ಏಳು ಕಾಲೇಜುಗಳ ಸಮಾರಂಭಗಳಿಗೆ ಶ್ರೀ ಪ್ರತೀಮ್ ಕುಮಾರ್ ಎಲ್.ಟಿ.(ಸ್ಕೌಟ್) ಅವರು ಮುಖ್ಯ ಅತಿಥಿಗಳಾಗಿ ಆಗಮಿಸಿ, ದೀಪವನ್ನು ಬೆಳಗಿಸಿ ರೋವರ್ ಮತ್ತು ರೇಂಜರ್ ಘಟಕಗಳನ್ನು ಪ್ರಾರಂಭಿಸಿದರು.

## ಬೀದರ್

ದಿನಾಂಕ 01–08–2013 ರಂದು ಬೀದರ ಜಿಲ್ಲೆ ಬಸವ ಕಲ್ಯಾಣ ತಾಲ್ಲೂಕು ಸ್ಥಳೀಯ ಸಂಸ್ಥೆಯ ವತಿಯಿಂದ ಸ್ಕೌಟರ್ಸ್–ಗೈಡರ್ಸ್ ಸಮಾವೇಶವನ್ನು ಹಮ್ಮಿಕೊಳ್ಳಲಾಗಿತ್ತು. ಪಟ್ಟಣದ ಶಾಂತಿನಿಕೇತನ ಹಿರಿಯ ಪ್ರಾಥಮಿಕ ಶಾಲೆಯಲ್ಲಿ ನಡೆದ ಸಮಾವೇಶದಲ್ಲಿ 26 ಸ್ಕೌಟರ್‌ಗಳು 18 ಗೈಡರ್‌ಗಳು ಪಾಲ್ಗೊಂಡಿದ್ದರು.

ಶ್ರೀ ಎಂ.ಎಸ್. ಬಾವಣೆ ತೋಟಗಾರಿಕಾ ಇಲಾಖೆಯ ನಿರ್ದೇಶಕರು, ಸಮಾವೇಶದ ಉದ್ಘಾಟನೆಯನ್ನು ನೆರವೇರಿಸಿ, ಸರ್ಕಾರದ "ಕ್ಷೀರ ಭಾಗ್ಯ ಯೋಜನೆ"ಗೆ ಚಾಲನೆಯನ್ನು ನೀಡಿದರು. ಕಾರ್ಯಕ್ರಮ ಉದ್ದೇಶಿಸಿ ಮಾತನಾಡಿದ ನಿರ್ದೇಶಕರು ಶಾಲಾ ಜೀವನದಿಂದಲೇ ಉತ್ತಮ ಚಾರಿತ್ರ್ಯ ನಿರ್ಮಾಣಕಾರ್ಯ ಆಗಬೇಕಾಗಿದೆ. ಆ ನಿಟ್ಟಿನಲ್ಲಿ ಸ್ಕೌಟ್ಸ್–ಗೈಡ್ಸ್ ಸಂಸ್ಥೆಯ ಪಾತ್ರ ಮಹತ್ವದ್ದು ಎಂದರು.

ತಾಲ್ಲೂಕಿನ ದೈಹಿಕ ಶಿಕ್ಷಕರ ಸಂಘದ ಅಧ್ಯಕ್ಷ ಶ್ರೀ ಶಿವಕುಮಾರ ಜಡಗೆ ರವರು ಸ್ಕೌಟ್ಸ್–ಗೈಡ್ಸ್‌ಗಳ ನೈತಿಕ, ಚಾರಿತ್ರ್ಯವರ್ಧನೆಗೆ ಸ್ಕೌಟಿಂಗ್ ಅಗತ್ಯ. ತಾಲೂಕಿನ ಎಲ್ಲಾ ಶಾಲೆಗಳಲ್ಲಿ ದಳ ಪ್ರಾರಂಭಕ್ಕೆ ಬೇಕಾದ ಸಹಾಯ ಸಂಘದಿಂದ ಮಾಡುವುದಾಗಿ ಆಶ್ವಾಸನೆ ನೀಡಿದರು. ಸಮಾವೇಶವು ಮುಖ್ಯಗುರುಗಳ ವಂದನಾರ್ಪಣೆಯೊಂದಿಗೆ ಮುಕ್ತಾಯವಾಯಿತು.

*************

ದಿನಾಂಕ 02–08–2013ರಂದು ಔರಾದ ಪಟ್ಟಣದ 'ಕಸ್ತೂರಿ ಬಾಯಿ ಗಾಂಧಿ ಭಾಲಕಿಯರ ವಸತಿ ಶಾಲೆಯಲ್ಲಿ ತಾಲೂಕು ಮಟ್ಟದ ಸ್ಕೌಟರ್ಸ್–ಗೈಡರ್ಸ್ ಸಮಾವೇಶ ಜರುಗಿತು. ಸಮಾವೇಶದಲ್ಲಿ 2013–14ನೇ ಶೈಕ್ಷಣಿಕ ವರ್ಷದ ಕ್ರಿಯಾಯೋಜನೆ, ವಾರ್ಷಿಕ ಮಕ್ಕಳ ಗಣನೆ, ಮಕ್ಕಳಿಗೆ ಸಂಘಟಿಸಬೇಕಾದ ಕಾರ್ಯಕ್ರಮಗಳು, ಶಿಕ್ಷಕರ ತರಬೇತಿಗಳು ಮತ್ತು ಸಮುದಾಯ ಸೇವಾ ಶಿಬಿರಗಳಂಥಹ ಮಹತ್ವದ ವಿಷಯಗಳು ಚರ್ಚೆಯಾದವು.

ಕಾರ್ಯಕ್ರಮದಲ್ಲಿ ತಾಲೂಕಿನ ಕ್ಷೇತ್ರ ಶಿಕ್ಷಣಾಧಿಕಾರಿಗಳಾದ ಶ್ರೀ ಶಿವಕುಮಾರಸ್ವಾಮಿ ಸ್ಥಳೀಯ ಸಂಸ್ಥೆ ಕಾರ್ಯದರ್ಶಿ ಶ್ರೀ ಶಿವಕುಮಾರ ಮೆಣಸೆ ಮತ್ತು ಕೆ.ಜಿ.ಬಿ.ವಿ. ಶಾಲೆಯ ಮುಖ್ಯೋಪಾಧ್ಯಾಯಿನಿ ಶ್ರೀಮತಿ ಮೀನಾಕುಮಾರಿ ಭಾಗವಹಿಸಿ ಶಿಕ್ಷಕರಿಗೆ ಮಾರ್ಗದರ್ಶನ ನೀಡಿದರು.

ಸಂಸ್ಥೆಯ ಮುಖ್ಯೋಪಾದ್ಯಾಯಿನಿ ಶ್ರೀಮತಿ ಮೀನಾಕುಮಾರಿ ಅಧ್ಯಕ್ಷೀಯ ನುಡಿ ಹೇಳಿದರು. ಶ್ರೀ ವೆಂಕಟರಾವ ದೂಂಬಾಳೆ ಶಿಕ್ಷಕರು ಸ್ವಾಗತಿಸಿದರೆ ಶ್ರೀ ಮಲ್ಲಿಕಾರ್ಜುನ ಟಂಕಸಾಲೆ ಕಾರ್ಯಕ್ರಮದ ವಂದನಾರ್ಪಣೆ ನಡೆಸಿಕೊಟ್ಟರು.

*********

ಜಿಲ್ಲೆಯ ಬಾಲ್ಕಿ ಪಟ್ಟಣದಲ್ಲಿ ದಿನಾಂಕ 05-08-2013 ರಂದು ಸ್ಕೌಟರ್ಸ್-ಗೈಡರ್ಸ್ ಸಮಾವೇಶ ನಡೆಯಿತು. ಸಮಾವೇಶದಲ್ಲಿ ಬಾಲ್ಕಿ ತಾಲೂಕು ಕ್ಷೇತ್ರ ಶಿಕ್ಷಣಾಧಿಕಾರಿ ಶ್ರೀ ಜಿ. ಹುನಗುಂದ ಉಪನಿರ್ದೇಶಕರು ಸಾರ್ವಜನಿಕ ಶಿಕ್ಷಣ ಇಲಾಖೆ ಬೀದರ ಜಿಲ್ಲಾ ಸಂಘಟನಾ ಆಯುಕ್ತ ಶ್ರೀ ಶಿವಕುಮಾರ ಹಾಲಹಳ್ಳಿ, ಜಿಲ್ಲಾ ಗೈಡ್ಸ್ ಆಯುಕ್ತೆ ಶ್ರೀಮತಿ ಲೀಲಾವತಿ ಚಕೋತೆ, ಶ್ರೀ ಬಾಬುರಾವ ನಿಂಬುರೆ, ಶ್ರೀ ಬಾಜಿರಾವ ಮೆಹತೆ ಹಾಗು 48 ಸ್ಕೌಟರ್-ಗೈಡರ್‌ಗಳು ಭಾಗವಹಿಸಿದ್ದರು.

ನಂತರ ಸಮಾವೇಶವನ್ನು ಉದ್ದೇಶಿಸಿ ಮಾತನಾಡಿದ ಕ್ಷೇತ್ರ ಶಿಕ್ಷಣಾಧಿಕಾರಿ ಶ್ರೀ ಜಿ. ಹುನಗುಂದ ರವರು ಸ್ಕೌಟ್ಸ್-ಗೈಡ್ಸ್ ಸಂಸ್ಥೆಯು ಕಳೆದ 100 ವರ್ಷಗಳಿಂದ ಅವಿರತವಾಗಿ ಶಾಲಾ ಮಕ್ಕಳಿಗೆ / ಯುವಜನತೆಗೆ ಮೌಲ್ಯಗಳನ್ನು ಬಿತ್ತುತ್ತಾ ಭಾವಿ ಸತ್ಪ್ರಜೆ ನಿರ್ಮಾಣ ಮಾಡುತ್ತಿದೆ. ಸಂಸ್ಥೆಯೊಂದಿಗೆ ಶಿಕ್ಷಣ ಇಲಾಖೆ ಸದಾ ಸಿದ್ಧವಾಗಿದೆ. ಶಿಕ್ಷಕರು ಸಹ ಸೇವಾ ಕಾರ್ಯಕ್ಕೆ ಕಂಕಣ ಬದ್ಧರಾಗಿರಬೇಕೆಂದರು.

ಜಿಲ್ಲಾ ಗೈಡ್ಸ್ ಆಯುಕ್ತೆ ಲೀಲಾವತಿ ಚಕೋತೆ ಮಾತನಾಡುತ್ತಾ. ಭಾರತ್ ಸ್ಕೌಟ್ಸ್-ಗೈಡ್ಸ್ ಇದೊಂದು ವಿಶ್ವ ಭ್ರಾತೃತ್ವ ಸಂಸ್ಥೆ ಸ್ಕೌಟಿಂಗ್ ಜೀವನ ಬದುಕನ್ನು ಬದುಕುವ ಕಲೆಯನ್ನು ಕಲಿಸುತ್ತದೆ ಎಂದರು.

## ಧಾರವಾಡ

ದಿನಾಂಕ : 01-08-2013 ರಿಂದ 05-08-2013 ರ ವರೆಗೆ ಜಿಲ್ಲಾ ಸಂಸ್ಥೆ ಆವರಣದಲ್ಲಿ ಜಿಲ್ಲಾ ಮಟ್ಟದ ತೃತೀಯ ಸೋಪಾನ ಪದಕ ಶಿಬಿರ ಜರುಗಿತು. ಶಿಬಿರದಲ್ಲಿ 250 ಸ್ಕೌಟ್ಸ್-ಗೈಡ್ಸ್‌ಗಳು ಪಾಲ್ಗೊಂಡಿದ್ದರು. ಜಿಲ್ಲಾ ಕಾರ್ಯದರ್ಶಿಗಳಾದ ಶ್ರೀಮತಿ ಪ್ರಭಾ ಲೋಂಡೆ ಹಾಗೂ ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಎಂ.ಎಂ. ಲೋಂಡೆ ಅವರು ನೇತೃತ್ವ ವಹಿಸಿದ್ದರು. ಶ್ರೀಮತಿ ಪ್ರೇಮಾ ಮಂಗಳೂರು ತರಬೇತಿ ಆಯುಕ್ತರು ಶ್ರೀ ಎ. ನರಗುಂದ ಹಾಗೂ ಶ್ರೀ ಕುರವತ್ತಿಮಠ - ಶ್ರೀ ಭಂಡಿವಡ್ಡರ, ಶ್ರೀ ಗುಂಡಾರ ಶ್ರೀ ಎಂ.ವ್ಹಿ ಪಾಟೀಲ, ಶ್ರೀ ಕುರುಕುರೆ, ಶ್ರೀ ಮೆಣಸಗೊಂಡ, ಶ್ರೀಮತಿ ಗಿರಿಜಾ ಕುರವತ್ತಿ, ಶ್ರೀಮತಿ ಲಕ್ಷ್ಮೀ ಕೋಡಿಯಾ ಇವರೆಲ್ಲರೂ ಸಹಾಯಕರಾಗಿ ತರಬೇತಿ ನೀಡಿದರು. ದಿನಾಂಕ 05-08-2013 ರಂದು ಬೆಳಿಗ್ಗೆ ಸರ್ವಧರ್ಮ ಪ್ರಾರ್ಥನೆಯೊಂದಿಗೆ ಶಿಬಿರ ಮುಕ್ತಾಯವಾಯಿತು.



## Gone Home

# Sri R.VENKANNA

**District Chief Commissioner, Bellary.**
**Member, State Executive Committee,**
**The Bharat Scouts and Guides, Karnataka.**
**Member, National Finance Committee,**
**The Bharat Scouts and Guides, India.**

The President and the Members of The Bharat Scouts and Guides, Karnataka State record with deep regret the sad demise of **SRI R.VENKANNA,** District Chief Commissioner, Bellary District Association, Member, State Council, State Executive Committee. The Bharat Scouts And Guides, Karnataka and Member, National Council, National Finance Committee, Bharat Scouts And Guides, India on Friday the 9th August 2013 at Bangalore at the age of 76 after brief illness.

He leaves behind his wife, one Son, two Daughters, Grand Children and a host of relatives. He has served as The Headmaster, Cub Master in the Govt. School, Bellary, Assistant State Organizing Commissioner (Scouts) of Bellary and Gulbarga Division for a number of years, District Organizing Commissioner (Scouts), District Secretary, District Commissioner (Scouts), Bellary. He served as a Leader Trainer (Cubs) for five decades.

He was a very active volunteer and In recognition of his meritorious service to the movement he was decorated with the National Award of the "Silver Star" by His Excellency the President of India Sri A.P.J.Abdul Kalam during the year 2007at Rashtrapathi Bhavan, New Delhi.

In this hour of Grief and Sorrow, We join the family members of Sri R.Venkanna in praying for the departed soul.

We pray God almighty to give necessary courage and strength to his family members to bear a his irreparable loss.

**May His Soul Rest in Peace**

State Secretary



# -: GONE HOME:-

## SMT. SHANTHA GIRIYANNA

**Leader Trainer(Guides),**
**District Training Commissioner (Guides),**
**Mysore District**
**Member, State Executive Committee,**
**Bharat Scouts and Guides, Karnataka**

We record with deep regret the Sad, Sudden and Untimely demise of Smt Shantha Giriyanna, Leader Trainer (Guides), District Training Commissioner(Guides), Bharat Scouts and Guides, Mysore District and Member, State Executive Committee, Bharat Scouts and Guides, Karnataka on 18th August 2013 at Mysore. She was aged about 75 years and leaves behind a large number of Relatives and Well-wishers.

She has served the Movement for the last Five Decades in many capacities as Unit Leader & Leader Trainer. She has prepared many Rajya Puraskar and Rashtrapathi Guides and HWB Holders. She has assisted and conducted many Training Courses from Basic to HWB at District, State & National Levels. She has assisted in Rajyapuraskar & Rashtrapathi Testing Camp, and also in many Rallies, Jamborettes, Jamborees, Workshops & Special Courses and Programmes.

She was Awarded the **National Award** of **Silver Star** for the Meritorious and Distinguished Services rendered by her to the Movement and she received the Award from His Excellency the President of India Dr. A.P.J.Abdul Kalam during the year 2007. She received **International Award** of Asia Pacific Adult Leader's Achievement Award from His Excellency The Governor of Karnataka Sri. H. R. Bhardwaj during the year 2010.

She served in the Dept. of Public Instruction, Govt. of Karnataka as a primary School Teacher and retired as Headmistress. She was a very Friendly, Simple and Hard working person. She was honoured by many Voluntary Organizations in Mysore as a Model Teacher & Empowered Women.

**IN THIS HOUR OF GRIEF AND SORROW, WE JOIN THE MEMBERS OF HER FAMILY IN PRAYING FOR THE DEPARTED SOUL. MAY HER SOUL REST IN PEACE.**

**STATE SECRETARY**

...............ಹಿಂದಿನ ಸಂಚಿಕೆಯಿಂದ

## ಅಧ್ಯಾಯ – 3 ಕಾರ್ಯಸರಣಿ ಶಿಬಿರಾಗ್ನಿ ಉದಂತ ಸಂ – 9

# ಶಿಬಿರ ಕೌಶಲ್ಯ
# (CAMP CRAFT)

## ಶಿಬಿರದಲ್ಲಿ ಸೌಖ್ಯ – ಆವರಣ – ಶಿಬಿರ ಸರಂಜಾಮು – ಬೀಡುಬಿಡುವುದು ಬೆಂಕಿಯನ್ನು ಅಣಿಮಾಡುವುದು – ಶಿಬಿರವನ್ನು ಚೊಕ್ಕಟವಾಗಿಡುವುದು

**ಕೂಡುವುದು ಹೇಗೆ?**

ನೆಲವು ತೇವದಿಂದಿದ್ದಾಗ, ಶಿಬಿರದಲ್ಲಿ ಕೂಡುವುದು ಹೇಗೆ ? ಇದು ತಿಳಿದಿರಬೇಕಾದ ವಿಷಯವೇ. ಕೆಳಗೆ ಕೂಡುವ ಬದಲು ಕುಕ್ಕರಗಾಲಿನಲ್ಲಿ ಕೂಡಿ. ಇಂಡಿಯಾದಲ್ಲಿ ಹಿಮ್ಮಡಿಯ ಮೇಲೆ ಕೂಡುತ್ತಾರೆ. ಚಿಕ್ಕವರಾಗಿದ್ದಾಗ, ಅಭ್ಯಾಸ ಮಾಡಿಕೊಳ್ಳದಿದ್ದರೆ, ಈ ರೀತಿ ಕೂಡುವುದು ಪ್ರಯಾಸಕರವಾಗುತ್ತದೆ. ಹಿಮ್ಮಡಿಗೆ ಆಸರೆಯಾಗಿ ಒಂದು ಕಲ್ಲು ಅಥವಾ ಮರದ ತುಂಡನ್ನು ಇಟ್ಟುಕೊಂಡರೆ, ಇದು ಸುಲಭವಾಗುತ್ತದೆ.



*ಈ ಹಿರಿಯ ಶಿಬಿರ ವಾಸಿಯು ತೇವದ ನೆಲವು ಸೋಕದಂತೆ ತನ್ನದೇ ಆದ ರೀತಿಯಲ್ಲಿ ಕೂಡುತ್ತಾನೆ.*

ದ. ಆಫ್ರಿಕಾದ ಬೋಯರ್‌ಗಳು ಮತ್ತು ಇತರ ಶಿಬಿರವಾಸಿಗಳು, ಒಂದು ಹಿಮ್ಮಡಿಯ ಮೇಲೆ (ವೀರಮಂಡಿ) ಕೂಡುತ್ತಾರೆ. ಈ ರೀತಿ ಕೂಡುವುದು ಮೊದಲಿಗೆ ಸ್ವಲ್ಪ ಕಷ್ಟವಾಗುತ್ತದೆ.

**ಬೆಂಕಿಯನ್ನು ಒಟ್ಟುವುದು**

ರೆಡ್ ಇಂಡಿಯನ್ನರು, ಬೆಂಕಿಯ ವಿಷಯದಲ್ಲಿ ಬುದ್ಧಿವಂತರು. ಅವರು ಅಣಿ ಮಾಡುವ ನಾಲ್ಕು ರೀತಿಗಳನ್ನು ಇಲ್ಲಿ ಕೊಡಲಾಗಿದೆ.

1. ಸಭಾಗ್ನಿ (Council fire) ಇದು 'ಟೀಪೀ ಯ ಒಳಗಡೆ ಉಪಯೋಗಿಸುವ ಔಪಚಾರಿಕ ರೀತಿ.
2. ಮಿತ್ರಾಗ್ನಿ (Friendly fire) ಇದು ಸಭಾಗ್ನಿಗಿಂತಲೂ ದೊಡ್ಡದು. ಹಳ್ಳಿಯಲ್ಲಿನ ಎಲ್ಲರನ್ನೂ ಇದು ಬೆಚ್ಚಗಿರಿಸುತ್ತದೆ.
3. ಸಂಕೇತಕ್ಕಾಗಿ ಬೆಂಕಿ (Signal fire) ಹೊಗೆ ಸಂಕೇತಗಳನ್ನು ಕಳುಹಿಸಲು ಇದನ್ನು ಅಣಿಗೊಳಿಸಲಾಗುತ್ತಿತ್ತು.
4. ಅಡಿಗೆ ಬೆಂಕಿ (Cooking fine) ಇದು ಬಹಳ ಸಣ್ಣ ಪ್ರಮಾಣದ, ಕೆಂಡದಿಂದ ಕೂಡಿದ, ಅಡಿಗೆ ಮಾಡಲು ಬರುವ ರೀತಿಯ ಬೆಂಕಿ.

ಸ್ಕೌಟುಗಳೂ ಇದೇ ರೀತಿಯ ಬೆಂಕಿಯ ಒಲೆಗಳನ್ನು ಉಪಯೋಗಿಸುತ್ತಾರೆ.

**ಆವರಣವನ್ನು ಸ್ವಚ್ಛಗೊಳಿಸುವುದು**

ಎಲ್ಲಾ ಕಗ್ಗಾಡು ಜನರೂ ಮಾಡುವಂತೆ, ಮೊದಲು ಆವರಣವನ್ನು ಸ್ವಚ್ಛಗೊಳಿಸಬೇಕು. ಹುಲ್ಲು, ಒಣಗಿದ ಎಲೆ, ಕಸಕಡ್ಡಿ ಇತ್ಯಾದಿ., ಸುತ್ತಲೂ ತೆಗೆದು ಸ್ವಚ್ಛ ಮಾಡಬೇಕು. ಇಲ್ಲದಿದ್ದರೆ, ಕಿಡಿಹಾರಿದಾಗ, ಅಕ್ಕಪಕ್ಕದ ಗಿಡ, ಗೆಂಟೆಗಳು ಹತ್ತಿಕೊಂಡು, ಅದೇ ಕಾಡು ಕಿಚ್ಚಾಗಬಹುದು. ಅನೇಕ ಕಡೆಗಳಲ್ಲಿ ಕಾಣಬರುವ ಕಾಡುಕಿಚ್ಚುಗಳು ಮೂರ್ಖ ಪ್ರವೇಶ ಸ್ಕೌಟುಗಳಿಂದ ಉಂಟಾದುದು. ಅವರಂದುಕೊಂಡ ಸಣ್ಣ ಶಿಬಿರಾಗ್ನಿಯು, ಇಡೀ ಕಾಡನ್ನೇ ಸುಡುತ್ತದೆ. ಬೆಂಕಿಯು ಹರಡುವ ಸಾಧ್ಯತೆಯಿದ್ದರೆ, ಅದನ್ನು ಆರಿಸಲು ಬೇಕಾದ ಹಸಿರೆಲೆಯ ಕೊಂಬೆಗಳು, ಒದ್ದೆಯಾದ ಹಳೆಯ ಗೋಣಿಚೀಲಗಳು, ಇತ್ಯಾದಿ ತಯಾರಾಗಿಟ್ಟುಕೊಳ್ಳಬೇಕು.

ಸ್ಕೌಟುಗಳು ಎಚ್ಚರಿಕೆ ವಹಿಸಿ, ಆಕಸ್ಮಿಕವಾಗಿ ಸಂಭವಿಸುವ ಇಂತಹ ಕಾಡುಬೆಂಕಿಯನ್ನು ಆರಿಸಲು ತಯಾರಾಗಿರಬೇಕು. ಇದು ಆ ಆವರಣದ ಮಾಲೀಕನಿಗೆ ದನ/ಕುರಿಗಳ ಮಂದೆ, ಹೊಲಗಳು ಇತ್ಯಾದಿ ಹೊಂದಿರುವ ರೈತರಿಗೆ ಮತ್ತು ಅರಣ್ಯ ಸಂಪತ್ತಿನ ರಕ್ಷಣೆಗೆ ಸ್ಕೌಟುಗಳು ಮಾಡಬಹುದಾದ ಒಂದು ಉಪಕಾರವಾಗಿದೆ.

...........ಮುಂದುವರೆಯುತ್ತದೆ

# ಕರ್ನಾಟಕ ಸ್ಕೌಟ್ ಮತ್ತು ಗೈಡ್

ವಾರ್ತಾ ಪತ್ರಿಕೆ

# Karnataka Scout & Guide News Magazine

Monthly, Published by
**The Bharat Scouts & Guides, Karnataka**
State Headquarters, Kondajji Basappa Road
Prof. P. Sivashankar Circle, Fort
Bangalore-560 002. Tel : 26701227




*We have got to make this world a better and happier place and each of you can do that your "Law and Promise" is to help other people at all times. The World Needs You.*

*- Olave Lady Baden Powell*




**ಸಂಚಿಕೆಯ ವಾರ್ಷಿಕ ಚಂದಾ ರೂ. 100/-**

ಚಂದಾಹಣವನ್ನು
ರಾಜ್ಯ ಕಾರ್ಯದರ್ಶಿ ಹಾಗೂ ಸಂಪಾದಕರು
ಕರ್ನಾಟಕ ಸ್ಕೌಟ್ ಮತ್ತು ಗೈಡ್ ಮಾಸಪತ್ರಿಕೆ
ರಾಜ್ಯ ಕೇಂದ್ರ ಕಾರ್ಯಾಲಯ, ಕೊಂಡಜ್ಜಿ ಬಸಪ್ಪ ರಸ್ತೆ,
ಪ್ರೊ. ಪಿ. ಶಿವಶಂಕರ್ ವೃತ್ತ, ಕೋಟೆ,
ಬೆಂಗಳೂರು-560 002
ಇವರ ವಿಳಾಸಕ್ಕೆ ಮನಿ ಆರ್ಡರ್ (ಎಂ.ಓ.)
ಮೂಲಕ ಕಳುಹಿಸಬಹುದು






ದಿನಾಂಕ 03-08-2013ರಂದು ಬೆಂಗಳೂರಿನ ಶಾಂತಿಗೃಹದಲ್ಲಿ ನಡೆದ ರಾಜ್ಯ ಮಟ್ಟದ ಸಮಾವೇಶದಲ್ಲಿ ಭಾಗವಹಿಸಿದ ಆಯುಕ್ತರುಗಳು ಮತ್ತು ಕಾರ್ಯದರ್ಶಿಗಳು ಹಾಗೂ ರಾಜ್ಯ ಪದಾಧಿಕಾರಿಗಳು.



ದಿನಾಂಕ 15.08.2013ರಂದು ರಾಜ್ಯ ಕೇಂದ್ರ ಕಾರ್ಯಾಲಯ ಆವರಣದಲ್ಲಿ ನಡೆದ 67ನೇ ಸ್ವಾತಂತ್ರ್ಯೋತ್ಸವ ದಿನಾಚರಣೆ ಸಂದರ್ಭದಲ್ಲಿ ರಾಜ್ಯ ಮುಖ್ಯ ಆಯುಕ್ತರು ಧ್ವಜಾರೋಹಣ ನೆರವೇರಿಸಿ ಶುಭಹಾರೈಸಿದರು. ಸಮಾರಂಭದಲ್ಲಿ ಭಾಗವಹಿಸಿದ ಸ್ಕೌಟ್ಸ್-ಗೈಡ್ಸ್‌ಗಳ ವಿಹಂಗಮ ನೋಟ.



ರಾಜ್ಯ ಕೇಂದ್ರ ಕಛೇರಿ ಆವರಣದಲ್ಲಿ ನಡೆದ 67ನೇ ಸ್ವಾತಂತ್ರೋತ್ಸವ ಕಾರ್ಯಕ್ರಮದಲ್ಲಿ ಶ್ರೀ ಕೊಂಡಜ್ಜಿ ಬ. ಷಣ್ಮುಖಪ್ಪ ರಾಜ್ಯ ಮುಖ್ಯ ಆಯುಕ್ತರು, ಮಾಜಿ ಸ್ಥಾನಿಕ ಆಯುಕ್ತರಾದ ಮಿಸ್. ಮನೋಹರ, ಸಂಸ್ಥೆಯ ಹಿರಿಯ ಸದಸ್ಯರಾದ ಶ್ರೀ ಕೆ. ವಿ. ಕೃಷ್ಣಸ್ವಾಮಿರಾವ್, ರಾಜ್ಯ ಪರಿಷತ್ ಸದಸ್ಯರಾದ ಶ್ರೀ ಆರ್. ಡಿ. ಮೂರ್ತಿ, ರಾಜ್ಯ ಜಂಟಿ ಕಾರ್ಯದರ್ಶಿ (ಸ್ಕೌಟ್ಸ್) ಶ್ರೀ ಎಂ. ಎ. ಚೆಲ್ಲಯ್ಯ ಹಾಗೂ ಇತರರನ್ನು ಕಾಣಬಹುದು.





ದಿನಾಂಕ 7 ರಿಂದ 13 ಆಗಸ್ಟ್ 2013 ರವರೆಗೆ ಕೊಂಡಜ್ಜಿ ಬಸಪ್ಪ ಸ್ಕೌಟ್ಸ್ ಮತ್ತು ಗೈಡ್ಸ್ ರಾಜ್ಯ ತರಬೇತಿ ಕೇಂದ್ರದಲ್ಲಿ ನಡೆದ ಸ್ಕೌಟ್ ಮಾಸ್ಟರ್ ಮತ್ತು ರೋವರ್ ಸ್ಕೌಟ್ ಲೀಡರ್‌ಗಳ ಮೂಲ ತರಬೇತಿ ಶಿಬಿರದಲ್ಲಿ ಭಾಗವಹಿಸಿದ ಶಿಬಿರಾರ್ಥಿಗಳು ಹಾಗೂ ಸಿಬ್ಬಂಧಿ ವರ್ಗ.

Regd. as News Paper (Magazine) RNI No : 13348/1959. Postal Regd. No KA/BGW-549/2012-2014
Permitted to Post under WPP System. Vide No.: WPP-87.
Posted at: Mail Business Centre, Bangalore GPO on 25, 28, 30 Every Month (No. of Pages : 4 + 24 = 28)







ದಿನಾಂಕ 03 ಮತ್ತು 04 ಆಗಸ್ಟ್ 2013ರಂದು ರಾಜ್ಯ ಕೇಂದ್ರ ಕಾರ್ಯಲಾಯದ ಆವರಣದಲ್ಲಿ ಜರುಗಿದ ಏಷಿಯಾ ಪೆಸಿಫಿಕ್ ಪ್ರದೇಶಿಕ ಮಟ್ಟದ ಆಕಾಶದಲ್ಲಿ ಜಾಂಬೂರಿ (*JOTA*) ಮತ್ತು ಅಂತರ್ಜಾಲದಲ್ಲಿ ಜಾಂಬೂರಿ (*JOTI*) ಕಾರ್ಯಕ್ರಮದಲ್ಲಿ ಸ್ಕೌಟ್ಸ್-ಗೈಡ್ಸ್‌ಗಳು.



ರಾಜ್ಯ ಕೇಂದ್ರ ಕಾರ್ಯಾಲಯದಲ್ಲಿ ನಡೆದ ಸ್ವಾತಂತ್ರೋತ್ಸವ ದಿನಾಚರಣೆಯಂದು ಸಾಂಸ್ಕೃತಿಕ ಕಾರ್ಯಕ್ರಮದಲ್ಲಿ ಭಾಗವಹಸಿದ ಗೈಡ್ಸ್‌ಗಳು.



ಸಮುದಾಯ ಸೇವಾ ಶಿಬಿರದಲ್ಲಿ ಭಾಗವಹಿಸಿದ ಕೊಪ್ಪಳ ಪದವಿಪೂರ್ವ ಕಾಲೇಜಿನ ಸ್ಕೌಟ್ಸ್‌ಗಳು.



ದಿನಾಂಕ 06.07.2013ರಂದು ಗದಗ್‌ನ ಜಿ.ಎಚ್.ಪಿ.ಎಸ್. ಶಾಲೆಯ ವತಿಯಿಂದ ಏರ್ಪಡಿ ಚಾರಣ ಶಿಬಿರದಲ್ಲಿ ಭಾಗವಹಿಸಿದ ಗೈಡ್ಸ್‌ಗಳ



ಬೆಂಗಳೂರು ಉತ್ತರ ಜಿಲ್ಲೆ ಎಂ.ಇ.ಎಸ್ ಪಬ್ಲಿಕ್ ಶಾಲೆಯ ಸ್ಕೌಟ್ಸ್ ಗೈಡ್ಸ್‌ಗಳು, ಸೆಂಟ್ ಫಿಲೋಮಿನಾ ಆಂಗ್ಲ ಶಾಲೆಯಲ್ಲಿ ನಡೆದ ಶಿಬಿರದಲ್ಲಿ ಭಾಗವಹಿಸಿದ್ದರು. ಶ್ರೀಮತಿ ಸುಜಾತ ಇದರ ನಾಯಕತ್ವ ವಹಿಸಿದರು.



**SCOUTS**
Creating a Better World



If not delivered, please return to :
THE EDITOR, Karnataka Scout & Guide
State Headquarters, Kondajji Basappa Road.
Prof. P. Sivashankar Circle, Fort
Bangalore - 560 002. Ph: 080-26701227
e-mail.: shq@scout.org.in

**Published by : The Bharat Scouts & Guides, Karnataka, State Headquarters, Fort, Bangalore - 560 002.**
**Publisher & Editor : M.A. Khalid. Printed by : L. Lingappa, M.D. at Sathyasri Printers Pvt. Ltd., 16/1, 3rd Cross, 2nd Main, Kasturiba Nagar, Mysore Road, Bangalore - 560 026**